ಪ್ರಚಾರ ಪುಸ್ತಕಮಾಲೆ 146

# ಶಕ್ತಿ ವಿಕಾಸ

ಟಿ. ಜಿ. ಸಿದ್ಧಪ್ಪಾರಾಧ್ಯ





ಪ್ರಚಾರಪುಸ್ತಕಮಾಲೆ—೧೪೬

ಮೈಸೂರು ವಿಶ್ವವಿದ್ಯಾನಿಲಯ

# ಶಕ್ತಿ ವಿಕಾಸ

(ಶೈವದರ್ಶನದಲ್ಲಿ ಮೋಕ್ಷದ ಕಲ್ಪನೆ)

ಟಿ. ಜಿ. ಸಿದ್ಧಪ್ಪಾರಾಧ್ಯ, ಎಂ.ಎ., ಪಿಎಚ್.ಡಿ.



೧೯೬೨

ಮೊದಲನೆಯ ಮುದ್ರಣ : ೧೯೬೬
ಎರಡನೆಯ ಮುದ್ರಣ : ೧೯೮೨
(೧೦,೦೦೦ ಪ್ರತಿಗಳು)



ಬೆಲೆ : ೨೫ ಪೈಸೆ

ಪ್ರಕಾಶಕರು
ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-೬

ಮುದ್ರಕರು
ನಿರ್ದೇಶಕರು, ವಿಶ್ವವಿದ್ಯಾನಿಲಯ ಮುದ್ರಣಾಲಯ, ಮೈಸೂರು-೬

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ "ಸೆನೆಟ್" ಸಭೆಯ ಪ್ರಾರಂಭೋತ್ಸವ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶಹೊಂದದ ಸಾಮಾನ್ಯಜನರ ಹೃದಯವನ್ನು ಬೆಳಗಿ ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿಪ್ರಸಾರಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡಭಾಷೆಯ ಮೂಲಕ ತಿಳುವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯ ವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕ ವಾಗುತ್ತವೆ; ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕ ವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗು ತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು, ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರ ಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೆ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ

ಮುಂತಾದ ವಿಷಯಗಳನ್ನು ಕುರಿತ ನೂರ ನಲವತ್ತೈದು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗುತ್ತದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಶ್ರೀ ಟಿ. ಜಿ. ಸಿದ್ಧಪ್ಪಾರಾಧ್ಯ ಅವರ 'ಶಕ್ತಿವಿಕಾಸ' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ಮೈಸೂರು
೧೫—೧೨—೧೯೬೬

**ಕೆ. ಎಲ್. ಶ್ರೀಮಾಲಿ**
ವೈಸ್-ಛಾನ್ಸಲರ್

# ಕೃತಜ್ಞತಾ ನಿವೇದನೆ

ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗಶಾಖೆಯು 'ಶಕ್ತಿವಿಕಾಸ' ಎಂಬ ಈ ಕಿರುಹೊತ್ತಿಗೆಯನ್ನು ಪ್ರಕಟಿಸಿದ್ದಕ್ಕಾಗಿ ಅದರ ಅಧಿಕಾರಿಗಳಿಗೆ ನಾನು ಚಿರಋಣಿಯಾಗಿದ್ದೇನೆ. ಶಕ್ತಿವಿಕಾಸವೆಂಬುದು ಓದುಗರ ಆತ್ಮಶಕ್ತಿಯನ್ನು ಹೆಚ್ಚಿಸಿ ಅವರು ನೆಮ್ಮದಿಯಿಂದ ಬಾಳಲು ಅನುಕೂಲವಾಗುವ ವಿಧಾನವನ್ನು ತಿಳಿಸಲಿದೆ. ಇದು ಶೈವದರ್ಶನದಲ್ಲಿ ಮೋಕ್ಷದ ಕಲ್ಪನೆಯನ್ನು ಸಾಮಾನ್ಯಜನರಿಗೆ ತಿಳಿಯುವಂತೆ ಸುಲಭವಾಗಿ ವಿವರಿಸಲಿದೆ. ಸಾಧಕನು ತನಗೆ ಸಹಜವಾಗಿರುವ ಸಂಕೋಲೆಯನ್ನು ಬಿಡಿಸಿಕೊಂಡಮೇಲೆ ಅನುಭವಿಸುವ ಪರಿಪೂರ್ಣಸ್ಥಿತಿಯೇ ಶಕ್ತಿವಿಕಾಸವೆನಿಸುತ್ತದೆ. ತನಗೆ ಸಹಜವಾಗಿ ಆವರಿಸಿರುವ ಶಕ್ತಿಸಂಕೋಚವನ್ನು ಪರಮಾತ್ಮನ ಧ್ಯಾನೋಪಾಸನಗಳಿಂದ ಪರಿಹರಿಸಿಕೊಂಡು ಅವನು ಶಕ್ತಿವಿಕಾಸವನ್ನು ಹೇಗೆ ಹೊಂದಬಹುದೆಂಬುದೇ ಈ ಕಿರುಹೊತ್ತಿಗೆಯಲ್ಲಿ ನಿರೂಪಿಸಿರುವ ವಿಷಯ.

ಶೈವದರ್ಶನದ ಮೋಕ್ಷಸ್ವರೂಪವು ಶಕ್ತಿವಿಕಾಸವೇ ಆಗಿರುವ ಪ್ರಯುಕ್ತ ಅದರ ಪರಿಚಯವು ಸಾಧಕರೆಲ್ಲರಿಗೂ ಆಗಲೆಂಬ ಸದುದ್ದೇಶದಿಂದ ಪ್ರಸಾರಶಾಖೆಯು ಈ ಕಿರುಹೊತ್ತಿಗೆಯನ್ನು ಬರೆಸಿ ಪ್ರಕಟಿಸಿರುವುದು ಅಭಿನಂದನೀಯವೆನಿಸಿದೆ. ಶೈವರಾಗಲಿ ವೈಷ್ಣವರಾಗಲಿ ತಮ್ಮ ಶಕ್ತಿಯನ್ನು ವಿಕಾಸಗೊಳಿಸಿಕೊಂಡು ಸಾರ್ವಜನಿಕದೃಷ್ಟಿಯಿಂದ ಬಾಳುತ್ತಲೇ ತಮ್ಮ ಜನ್ಮವನ್ನು ಸಾರ್ಥಕಪಡಿಸಿಕೊಳ್ಳಲೇಬೇಕಾಗಿದೆ. ತನ್ನಲ್ಲಿಗೆ ಬರುವವರನ್ನು ಆತ್ಮೀಯತೆಯಿಂದ ಗೌರವಿಸುವಷ್ಟು ಉದಾರವರ್ತನೆ ಮನುಷ್ಯನಲ್ಲಿ ಬೆಳೆದಲ್ಲದೆ ಅವನು ನೆಮ್ಮದಿಯಿಂದ ಬಾಳಲಾರನು. ಹೀಗೆ

ಸರ್ವರ ಹಿತದಲ್ಲಿಯೇ ತನ್ನ ಹಿತವು ಬೆರೆತಿರುವುದರಿಂದ ಈ ಬಗೆಯ ಭಾವನೆ ವರ್ಧಿಷ್ಣುಗಳೆಲ್ಲರಿಗೂ ಆವಶ್ಯಕವೆನಿಸಿದೆ.

ಮಾನವರೆಲ್ಲರೂ ಪರಮಾತ್ಮನಿಗೆ ನೇರವಾಗಿ ಸಂಬಂಧಿಸಿ ಹಿಂದಿನಿಂದಲೂ ಅವನಿಗಾಗಿ ಅವನೊಡನೆ ಬಂದವರಾದ್ದರಿಂದ ಅದರ ಅರಿವು ಆದೊಡನೆ ಅವರಲ್ಲಿ ವಿಶಾಲಭಾವನೆ ಬೆಳೆದು ಪರಸ್ಪರ ಪ್ರೇಮಸೌಹಾರ್ದಗಳು ನೆಲೆಸಲು ಅವಕಾಶವಾಗುವುದು ಸಹಜ. ಈ ಬಗೆಯ ವಿಶ್ವಪ್ರೇಮವನ್ನು ಅರಿತು ಬಾಳಿನಲ್ಲಿ ಅಳವಡಿಸಿಕೊಂಡು ಆಚರಿಸುವವನೇ ಧೀರನೆನಿಸುವನು. ಈ ಬಗೆಯ ಧೈರ್ಯವರ್ಚಸ್ಸುಗಳು ಮಾನವರಲ್ಲಿ ಬೆಳೆಯಲೆಂಬ ಹೆಬ್ಬಯಕೆಯಿಂದ ಈ ಕಿರುಹೊತ್ತಿಗೆಯು ಹೊರಟಿದೆ.

ಇದನ್ನು ಮಹಾಜನರು ಓದಿ ತಮ್ಮನ್ನು ಆವರಿಸಿರುವ ಶಕ್ತಿ ಸಂಕೋಚವೆಂತಹದೆಂದು ತಿಳಿದು ಅದನ್ನು ಪರಿಹರಿಸಿಕೊಳ್ಳಲು ಜ್ಞಾನಕ್ರಿಯೆಗಳ ಸಮನ್ವಯಮಾರ್ಗವನ್ನು ಬಾಳಿನಲ್ಲಿ ಆಚರಿಸುತ್ತ ಶಕ್ತಿವಿಕಾಸವನ್ನು ಪಡೆದು ಅನುಭವಿಸಲೆಂದು ನಿರಭಿಮಾನದಿಂದ ಬಯಸುತ್ತೇನೆ.

ಪರಮಪವಿತ್ರವಾದ ಈ ಶಕ್ತಿವಿಕಾಸವನ್ನು ಸಾಧಿಸಲು ಮಾನವರಿಗೆ ಪರಮಾತ್ಮನು ಪೂರ್ಣಕೃಪೆಯಿಂದ ಆಶೀರ್ವದಿಸಲೆಂದು ಪ್ರಾರ್ಥಿಸಿ, ಈ ಅಲ್ಪಸೇವೆಯನ್ನು ಸಲ್ಲಿಸುವುದಕ್ಕೆ ಅವಕಾಶವನ್ನು ಕಲ್ಪಿಸಿದ್ದಕ್ಕಾಗಿ ಪ್ರಸಾರಶಾಖೆಯ ಅಧಿಕಾರಿಗಳಿಗೆ ನನ್ನ ಕೃತಜ್ಞತೆಯನ್ನು ಈ ಮೂಲಕ ಅರ್ಪಿಸಿದ್ದೇನೆ.

ಮಾನಸಗಂಗೋತ್ರಿ
ಮೈಸೂರು

ಟಿ. ಜಿ. ಸಿದ್ಧಪ್ಪಾರಾಧ್ಯ
ಸಂಸ್ಕೃತಾಧ್ಯಾಪಕ

# ವಿಷಯಾನುಕ್ರಮಣಿಕೆ

# ಶಕ್ತಿ ವಿಕಾಸ

## ಅವತರಣಿಕೆ

ಮಂಗಳೂರು ಜಿಲ್ಲೆಯ ಮೂಡಿಬಿದರೆ ಗ್ರಾಮದಲ್ಲಿ ಮೈಸೂರು ವಿಶ್ವವಿದ್ಯಾನಿಲಯದವರು ಏರ್ಪಡಿಸಿದ್ದ ಪ್ರಚಾರೋಪನ್ಯಾಸ ಮಾಲೆಯಲ್ಲಿ ಶಕ್ತಿವಿಕಾಸವನ್ನು ಉದ್ದೇಶಿಸಿ ಮಾಡಿದ ಭಾಷಣ ವನ್ನು ಅವಲಂಬಿಸಿ ಈ ಕಿರುಹೊತ್ತಿಗೆಯನ್ನು ಪ್ರಕಟಿಸಲಾಗಿದೆ. ಮಾನವನು ಚೇತನನೂ ಭಗವಂತನ ಅಂಶನೂ ಆಗಿದ್ದರೂ ಈ ದೇಹವೆಂಬ ಪಂಜರದಲ್ಲಿ ಸಿಲುಕಿ ತನ್ನ ಶಕ್ತಿಯನ್ನು ಕಳೆದು ಕೊಂಡು ಏಕೆ ನಿರ್ವೀರ್ಯನಾಗಿರುವನು ? ಅವನಿಗೆ ದೇಹದಲ್ಲಿ ಇಂದ್ರಿಯಗಳು, ಮನಸ್ಸು, ಬುದ್ಧಿ ಮೊದಲಾದ ಎಲ್ಲಾ ಸೌಕರ್ಯ ಗಳಿದ್ದರೂ ಅವನು ಏಕೆ ನಿರಾಶನಾಗಿರುವನು ? ಈ ಬಗೆಯ ಪ್ರಶ್ನೆಗಳನ್ನು ನಾನು ಮೊದಲಿಂದಲೂ ತಲೆಗೆ ಹಚ್ಚಿಕೊಂಡಿದ್ದು ದರಿಂದ ಇವುಗಳಿಗೆ ಸಮಂಜಸವಾದ ಉತ್ತರವನ್ನು ಹುಡುಕಲು ಹೊರಟಾಗ ನನ್ನ ಶಕ್ತಿಸಂಕೋಚವು ನನಗೆ ಮನವರಿಕೆ ಯಾಯಿತು. ಈ ಸಂಕೋಚದಿಂದ ನನಗೆ ಆಗಿದ್ದ ದುಷ್ಪರಿಣಾಮ ವನ್ನು ತೊಲಗಿಸಿಕೊಂಡು ಶಕ್ತಿವಿಕಾಸಕ್ಕಾಗಿ ಶ್ರಮಿಸಬೇಕೆಂಬ ಹಿರಿಯ ಆಶೆ ನನ್ನ ಮನಸ್ಸಿನಲ್ಲಿ ಬೇರೂರಿತು. “ಶಕ್ತಿಯ ಸಂಕೋಚವಿಕಾಸಗಳು ಮಾನವನಲ್ಲಿ ಹೇಗೆ ಸಂಭವಿಸುತ್ತವೆ ? ಶಕ್ತಿಸಂಕೋಚದಿಂದ ಅವನು ಅನುಭವಿಸುವ ದುರವಸ್ಥೆ ಎಂತ ಹದು ? ಶಕ್ತಿವಿಕಾಸದಿಂದ ಅವನು ಪಡೆಯುವ ಲಾಭ ಯಾವುದು? ಇದರಿಂದ ಅವನಿಗೆ ಸುಖಸಂತೋಷಗಳು ಲಭಿಸಬಹುದೇ ? ಮಾನವಜೀವನದ ಗುರಿ ಕೇವಲ ಭೋಗವೇ ? ತ್ಯಾಗವೇ ಅಥವಾ ಯೋಗವೇ ? ಇವು ಮೂರನ್ನೂ ಹೊಂದಿಸಿಕೊಂಡು

ಬಾಳಲಿಕ್ಕೆ ಅವನಿಗೆ ಸಾಧ್ಯವೇ ? ಇವೆಲ್ಲ ವಿಚಾರಗಳು ಕೂಲಂಕಷ ವಾದ ವಿವೇಚನೆಯನ್ನು ಅಪೇಕ್ಷಿಸತೊಡಗಿದವು. ಇವುಗಳ ವಿವೇಚನೆಯುಲ್ಲಾಸಕ್ತನಾದ ನನಗೆ ಮೊದಲು "ನನ್ನ ಶಕ್ತಿ ಎಂತಹುದು ? ಅದು ನನ್ನಲ್ಲಿ ಸ್ವಾಭಾವಿಕವೇ ? ಅಥವಾ ಸ್ವರೂಪವೇ ? ಅದು ನನ್ನಲ್ಲಿ ಗುಣವೇ? ಅಥವಾ ಅದೊಂದು ಸ್ವತಂತ್ರವಸ್ತುವೇ? ವಿಶ್ವವ್ಯಾಪಕನಾದ ಪರಮಾತ್ಮನಲ್ಲೂ ಅಂತಹದೊಂದು ಶಕ್ತಿಯುಂಟೇ ? ಹಾಗಿದ್ದರೆ ಅವನಿಗೂ ಆ ಶಕ್ತಿಗೂ ಇರುವ ಸಂಬಂಧವೆಂತಹುದು ?" ಈ ಬಗೆಯ ಜಿಜ್ಞಾಸೆ ನನ್ನಲ್ಲಿ ಹುಟ್ಟಿತು.

ಇಂತಹ ಜಿಜ್ಞಾಸೆ ನನ್ನಂತೆಯೇ ಇತರರಿಗೂ ಹುಟ್ಟುವುದು ಸಹಜ; ಯಾಕೆಂದರೆ ಮಾನವರೆಲ್ಲರೂ ಚೇತನರಾದ್ದರಿಂದ ಒಂದೇ ಬಗೆಯಾಗಿದ್ದರೂ ಶಕ್ತಿಸಂಬಂಧದಿಂದ ಪರಸ್ಪರವಾಗಿ ಬೇರೆಬೇರೆಯೇ ಆಗಿರುವರು. ಆದ್ದರಿಂದಲೇ ಒಬ್ಬೊಬ್ಬರ ಬಯಕೆಯೂ ಒಂದೊಂದು ಬಗೆಯಾಗಿರುವುದು. ಹಾಗೆಯೇ ಒಬ್ಬೊಬ್ಬರ ವಿವೇಚನೆಯೂ ಬೇರೆಬೇರೆ ರೀತಿಗಳಲ್ಲಿಯೇ ಪ್ರವರ್ತಿಸುತ್ತಿರುವುದು. ಅದೇ ರೀತಿಯಲ್ಲಿ ಒಬ್ಬೊಬ್ಬರ ಕೃತಿಯೂ ಒಂದೊಂದು ಬಗೆಯಾಗಿರುವುದು. ಹೀಗೆ ವೈವಿಧ್ಯ ವೈಷಮ್ಯಗಳಿರುವುದರಿಂದ ಮಾನವರು ಪರಸ್ಪರವಾಗಿ ಭಿನ್ನರೇ ಆಗಿರುವರು. ಈ ಭೇದವು ಅವರಲ್ಲಿ ವಾಸ್ತವವಾಗಿ ನೆಲೆಸಿದೆಯೆ ? ಅಥವಾ ಯಾವುದಾದರೂ ನಿಮಿತ್ತದಿಂದ ಬಂದಿದೆಯೆ ? ಅಥವಾ ಸ್ವಾಭಾವಿಕವಾಗಿದೆಯೆ ? ಅಥವಾ ಆಕಸ್ಮಿಕವಾಗಿ ಬಂದಿದೆಯೆ ? ಮಾನವರೆಲ್ಲರೂ ಚೇತನರಾದ್ದರಿಂದ ಪರಮಾತ್ಮನಿಗೆ ಸಂಬಂಧಿಸಿದ್ದರೂ ಪರಸ್ಪರವಾಗಿ ಏಕೆ ಭಿನ್ನರಾದರು ? ಅವರು ತಮ್ಮ ಬಯಕೆಗಳಲ್ಲೂ ಸಮಾಲೋಚನೆಗಳಲ್ಲೂ ಕಾರ್ಯರಚನೆಗಳಲ್ಲೂ ಏಕೆ ಒಂದೇ ಬಗೆಯಾಗಿಲ್ಲ ? ಈ ಬಗೆಯ ಜಿಜ್ಞಾಸೆ ಎಲ್ಲರಲ್ಲೂ ಹುಟ್ಟು

ವುದು ಸಹಜವೇ ಆಗಿದೆ. ಆದರೆ ಜೀವನದ ಜಂಜಾಟದಲ್ಲಿ ಯಾರಿಗೂ ಈ ಜಿಜ್ಞಾಸೆ ಮುಂದುವರಿಯುವುದು ಕಷ್ಟವೇ ಆಗುತ್ತದೆ.

ಈ ಬಗೆಯ ಕಷ್ಟವು ಎಲ್ಲರಂತೆ ನನಗೂ ಸಂಭವಿಸಿದರೂ ಸಹ ಈಶ್ವರಾನುಗ್ರಹದಿಂದ ಪರಿಹಾರವಾಗತೊಡಗಿತು. ಆಗ ಅದೇ ಜಿಜ್ಞಾಸೆ ನಿರಾತಂಕವಾಗಿ ಮುಂದುವರೆಯುತ್ತ ನನ್ನ ಬಾಳಿನ ಗುರಿಯ ಕಡೆಗೆ ತಿರುಗಿತು. ಈಶ್ವರನು ನನ್ನ ಹಿಂದಿನ ಜನ್ಮದ ಬಯಕೆಗನುಗುಣವಾಗಿ ನನ್ನನ್ನು ಉಪಾಧ್ಯಾಯವೃತ್ತಿಯಲ್ಲಿ ಇರಿಸಿರುವುದೇನೋ ಸರಿ. ಪ್ರತಿಯೊಬ್ಬರಿಗೂ ಅವನು ನಿಷ್ಪಕ್ಷಪಾತದೃಷ್ಟಿಯಿಂದ ಅವರವರ ಹಿಂದಿನ ವಾಸನೆಗೆ ತಕ್ಕಂತೆ ನಿರ್ದಿಷ್ಟವಾದ ಕರ್ತವ್ಯವನ್ನು ವಹಿಸಿರುವುದೂ ಸರಿಯೆ. ಆದರೆ "ಪ್ರತಿಯೊಬ್ಬರೂ ತಮ್ಮ ತಮ್ಮ ಕರ್ತವ್ಯಗಳನ್ನು ನಡೆಸಿಕೊಳ್ಳುವುದೊಂದೇ ಅವರ ಬಾಳಿನ ಗುರಿಯೇ? ಅದಕ್ಕಿಂತ ಹೆಚ್ಚಾಗಿ ಒಬ್ಬೊಬ್ಬನೂ ಸಾಧಿಸಿಕೊಳ್ಳುವುದು ಬೇರೆ ಏನಾದರೂ ಉಂಟೆ? ಆದರೆ ಮುಂಜಾನಿಂದ ಸಂಜೆಯವರೆಗೆ ನಾವು ದುಡಿಯುವುದೆಲ್ಲವೂ ನಮ್ಮ ಹೊಟ್ಟೆಬಟ್ಟೆಗಳಿಗೇ ಆಗುವುದಾದರೆ ಅಷ್ಟರಿಂದಲೇ ನಮ್ಮ ಶಕ್ತಿ ವಿಕಾಸಗೊಳ್ಳುವುದೆ? ನಮ್ಮ ಜೀವನ ಪಾವನಗೊಳ್ಳುವುದೆ? ಬಾಳು ಹಸನಾಗುವುದೆ? ನಿರಾಕಾರ ಪರಮಾತ್ಮನು ನಮ್ಮ ನಡೆನುಡಿಗಳನ್ನು ಪರೀಕ್ಷಿಸುತ್ತಿರುವುದರಿಂದ ನಮ್ಮ ಕರ್ತವ್ಯಪಾಲನೆಯಿಂದಲೇ ಅವನಿಗೆ ಸಮಾಧಾನವಾಗಬಹುದೇ? ಅವನು ಎಲ್ಲೆಡೆಯಲ್ಲೂ ತುಂಬಿಕೊಂಡಿರುವಂತೆ ನಮ್ಮಲ್ಲೂ ತುಂಬಿರುವನೇ? ಅವನು ನಮ್ಮಲ್ಲಿ ಇರುವುದಾದರೂ ಏಕೆ? ಅವನನ್ನೇ ನಂಬಿಕೊಂಡು ನಾವು ವ್ಯವಹರಿಸುವುದಾದರೆ ನಮ್ಮ ವಿಕಾಸಕ್ಕೆ ಧಕ್ಕೆ ಬರುವುದಿಲ್ಲವೇ? ಅವನಿಗಾದರೋ ದೇಹೇಂದ್ರಿಯಗಳಿಲ್ಲವಾದ್ದರಿಂದ ಅವನು ನಮ್ಮಲ್ಲಾ

ದರೂ ಏಕೆ ನೆಲಿಸಿರುವನು ? ಅವನಿಂದ ನಮಗೆ ಹಾನಿಯೇ ? ವೃದ್ಧಿಯೇ ? ಅವನನ್ನು ಮರೆತರೆ ನಾವು ಸ್ವತಂತ್ರರಾಗಿ ಬಾಳ ಲಾರೆವೇ ? ಅವನನ್ನು ಅರಿತರೆ ನಾವು ಪಡೆಯುವ ವಿಕಾಸವೆಂತ ಹುದು?" ಈ ಬಗೆಯ ಸಮಸ್ಯೆಗಳನ್ನು ನಾನು ಪರ್ಯಾಲೋಚಿಸ ತೊಡಗಿದೆನು. ಇವೆಲ್ಲದರ ಪರಿಣಾಮವಾಗಿ ನನಗೆ ನನ್ನ ಬಾಳಿನ ಪರಿಸ್ಥಿತಿಯನ್ನು ಅರಿಯಲು ಉತ್ಕಟವಾದ ಇಚ್ಛೆಯುಂಟಾ ಯಿತು.

## ಮಾನವನ ಇಂದಿನ ಪರಿಸ್ಥಿತಿ

ನನ್ನ ಪರಿಸ್ಥಿತಿಯೇ ಮಾನವರೆಲ್ಲರ ಪರಿಸ್ಥಿತಿಯೂ ಆಗಿರು ವಾಗ ಸಾಮಾನ್ಯಮಾನವನ ಪರಿಸ್ಥಿತಿಯನ್ನು ನಾನು ಅರಿಯ ತೊಡಗಿದೆನು. ಮಾನವನಲ್ಲಿ ಆತ್ಮ ಮತ್ತು ಹೊಟ್ಟೆ ಇವೆರಡು ಅಂಶಗಳು ಪ್ರಧಾನವಾಗಿ ಅವನ ಗಮನವನ್ನು ಸೆಳೆಯುತ್ತಲಿವೆ. ಇವೆರಡಕ್ಕೂ ಸಮಾನವಾದ ಗಮನವನ್ನು ಕೊಡುವವನೇ ವಿವೇಕಿ ಎನಿಸುವನು. ಆದರೆ ಇಂತವರು ಬಹಳ ವಿರಳ. ಅನೇಕರು ಆತ್ಮವಸ್ತುವನ್ನೇ ಅರಿಯರು. ಅವರೆಲ್ಲರೂ ಸಂಸಾರ ಚಕ್ರದಲ್ಲಿ ಬಹಳ ಕಾಲದಿಂದಲೂ ಅಲೆಯುತ್ತಲೇ ಇರುವರಾದರೂ ಒಮ್ಮೆಯಾದರೂ ತಮ್ಮ ಆತ್ಮದ ಯೋಗಕ್ಷೇಮವನ್ನೇ ಗಮನಿಸಿ ದಂತೆ ಕಾಣುವುದಿಲ್ಲ. ಹಾಗೆ ಅವರು ಗಮನಿಸಿದ್ದರೆ ಅವರಲ್ಲಿ ಆಧ್ಯಾತ್ಮ ವಿಕಾಸವಿರುತ್ತಿತ್ತು. ಆಗ ಅವರು ದುಃಖಕಾರ್ಪಣ್ಯಗಳ ಮಧ್ಯದಲ್ಲೂ ನಗುಮುಖದಿಂದ ಸಂತೋಷಗೊಳ್ಳುತ್ತಲೇ ಇರ ಬಹುದಾಗಿತ್ತು ! ಕಾಮಕ್ರೋಧಗಳನ್ನೂ ರಾಗದ್ವೇಷಗಳನ್ನೂ ತಡೆಯುತ್ತಲೇ ಶಾಂತಚಿತ್ತರಾಗಿ ಅವರು ಬಾಳಬಹುದಾಗಿತ್ತು ! ಆದರೆ ಆತ್ಮವನ್ನು ನಿರ್ಲಕ್ಷಿಸಿ ಅದರ ಗೋಜಿಗೇ ಹೋಗದೆ ಕೇವಲ ಹೊಟ್ಟೆಯನ್ನೇ ಗಮನಿಸಿದ್ದರಿಂದ ಅವರು ದರಿದ್ರರಾಗ

ತೊಡಗಿದರು. ಹೊಟ್ಟೆಬಟ್ಟೆಗಳಿಗಾಗಿಯೇ ದುಡಿಯುವವರು ಮೇಲೆ ಮೇಲೆ ಓಡಾಡುತ್ತ ನಿಶ್ಚಿತವಾದ ವ್ಯವಸಾಯವೇ ಇಲ್ಲದೆ ದರಿದ್ರರಾಗುವುದು ಸಹಜ. ಈ ವ್ಯವಸಾಯವಾದರೋ ಆತ್ಮ ನಿಶ್ಚಯವೇ ಆಗಿದೆ. ತನ್ನಲ್ಲಿಯೇ ತನಗೆ ನಿಶ್ಚಯವಿಲ್ಲದವನು ಹೊಟ್ಟೆಯನ್ನು ಎಷ್ಟು ತುಂಬಿದರೂ ಬಡತನದ ಬೇಗೆಯಲ್ಲಿಯೇ ನರಳತೊಡಗುವನು. ತನ್ನನ್ನೇ ತಾನು ತಿಳಿಯದೆ, ತನ್ನಲ್ಲಿಯೇ ತನಗೆ ವಿಶ್ವಾಸವಿಲ್ಲದೆ, ತನ್ನನ್ನು ತಾನೇ ಗೌರವಿಸದೆ ಇರುವವನು ಇದ್ದರೂ ಸತ್ತಹಾಗೆಯೇ ಸರಿ. ಅಂತವನು ಯಾವಾಗಲೂ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಿದ್ದರೂ ಹಸಿವಿನ ಬೇಗೆ ಯಲ್ಲಿಯೇ ನರಳುತ್ತಿರುವನು. ಯಾವನಿಗೆ ಹೊಟ್ಟೆಯ ಹಸಿವಿ ನಂತೆಯೇ ಆತ್ಮದ ಹಸಿವೂ ಅನುಭವಗೋಚರವಾಗುತ್ತದೆಯೋ ಅವನೇ ಆರೋಗ್ಯವಂತನೂ, ಧೀರನೂ, ಯೋಗಿಯೂ, ಪೂರ್ಣ ಪ್ರಜ್ಞನೂ ಆಗಬಲ್ಲನು. ಆದರೆ ಮಾನವರೆಲ್ಲರೂ ಸಾಮಾನ್ಯ ವಾಗಿ ಈ ಬಗೆಯ ಆರೋಗ್ಯಭಾಗ್ಯವನ್ನು ಪಡೆದಿಲ್ಲ. ಕೆಲವರಿಗೆ ಈ ಸೌಭಾಗ್ಯವಿರಬಹುದು, ಆದರೆ ಅನೇಕರು ಅನಾರೋಗ್ಯದಿಂದ ನರಳುತ್ತಲೇ ಹೊಟ್ಟೆಬಟ್ಟೆಗಳಿಗಾಗಿಯೇ ನಿರಂತರವೂ ಶ್ರಮಿಸು ತ್ತಿರುವುದಾಗಿ ಲೋಕದಲ್ಲಿ ಕಂಡುಬರುತ್ತದೆ.

ನನ್ನ ಪ್ರವಾಸಕಾಲದಲ್ಲಿ ಅನೇಕ ಸಂಸಾರಿಗಳ ಪರಿಸ್ಥಿತಿಯನ್ನು ತಿಳಿಯುವ ಸುಯೋಗ ಒದಗಿತ್ತು. ಆ ಕಾಲದ ನನ್ನ ಅನುಭವ ದಿಂದ ನನ್ನ ಮನಸ್ಸಿನ ಮೇಲೆ ಉತ್ತಮಪರಿಣಾಮವೇನೋ ಉಂಟಾಯಿತು. ಆದರೆ ಕೇವಲ ಹೊಟ್ಟೆಬಟ್ಟೆಗಳಿಗಾಗಿಯೇ ಅವಿವೇಕದಿಂದ ಶ್ರಮಿಸುವ ಅನೇಕ ಗೃಹಸ್ಥರು ಆತ್ಮವನ್ನೇ ಅರಿಯದಿರುವ ದೌರ್ಭಾಗ್ಯವು ನನ್ನ ಗಮನವನ್ನು ಸೆಳೆಯಿತು. ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖಯಾತನೆಯನ್ನು

ಅನುಭವಿಸುವ ಈ ಜನರಿಗೆ ತಾವು ಆತ್ಮರೆಂಬ ಅರಿವೇ ಇಲ್ಲದ ವಿಷಮಪರಿಸ್ಥಿತಿ ಎಂದು ತೊಲಗುವುದೋ ಎಂಬ ಹಿರಿಯ ಆಶೆ ನನ್ನ ಮನಸ್ಸನ್ನು ಅಂದು ಪ್ರವೇಶಿಸಿತು. ಆದರೆ ಮಾನವನ ಈ ಬಗೆಯ ಪರಿಸ್ಥಿತಿ ಈ ಕಾಲಕ್ಕಷ್ಟೇ ಅಲ್ಲದೆ ಹಿಂದಿನ ಕಾಲದಲ್ಲೂ ಹೀಗೆಯೇ ಇತ್ತೆಂದು ಶಾಸ್ತ್ರಗ್ರಂಥಗಳಿಂದ ನಮಗೆ ತಿಳಿದುಬರುತ್ತದೆ. ಹೀಗೆ ಅನೇಕ ಬಗೆಯಾಗಿರುವುದರಿಂದಲೇ ಈ ಲೋಕಕ್ಕೆ ಪ್ರಪಂಚವೆಂಬ ಹೆಸರು ಯುಕ್ತವೆನಿಸುತ್ತದೆ. ಪ್ರಪಂಚವೆಂದರೆ ವೈವಿಧ್ಯ. ರುಚಿಯಲ್ಲಿ, ಮತಿಯಲ್ಲಿ, ಪ್ರವೃತ್ತಿಯಲ್ಲಿ, ಭಾವನೆಯಲ್ಲಿ ಅನೇಕಬಗೆ ಇರುವುದರಿಂದಲೇ ಈ ಪ್ರಪಂಚವು ಮೊದಲಿನಿಂದ ಇಂದಿನವರೆಗೂ ವೈವಿಧ್ಯಪೂರ್ಣವಾಗಿಯೇ ಉಳಿದಿದೆ. ಮುಂದೆಯೂ ಇದು ಹಾಗೆಯೇ ಉಳಿಯುವುದು. ಇಂತಹ ಪರಿಸ್ಥಿತಿಯಲ್ಲಿ ಮಾನವನು ತನ್ನ ಮೇಲ್ಮೆಯನ್ನು ಹೇಗೆ ಸಾಧಿಸಿಕೊಳ್ಳಬೇಕೆಂಬುದನ್ನು ಮುಖ್ಯವಾಗಿ ಗಮನಿಸಬೇಕಾಗಿದೆ.

ಒಬ್ಬ ಪರಮಾತ್ಮನೇ ಅನೇಕ ರೂಪಗಳಲ್ಲಿ ಪರಿಣಮಿಸಿದ್ದರಿಂದ ಏಕವಸ್ತುವಿನ ಸತ್ಯತೆಯಂತೆಯೇ ಅನೇಕ ವಸ್ತುಗಳ ಸತ್ಯತೆಯನ್ನೂ ನಾವು ಒಪ್ಪಲೇಬೇಕಾಗುತ್ತದೆ. ಒಬ್ಬನೇ ತನ್ನ ವಿನೋದಕ್ಕಾಗಿ ಅನೇಕ ಆಕಾರಗಳನ್ನು ತಾಳಿರುವುದರಿಂದ ಅನೇಕವೆನಿಸಿದ ಪ್ರಪಂಚದಲ್ಲಿ ಪ್ರತಿಯೊಂದು ವಸ್ತುವೂ ತನ್ನದೇ ಆದ ವ್ಯಕ್ತಿತ್ವವನ್ನು ಪಡೆದೇ ಇರುತ್ತದೆ. ಹೀಗೆ ಪ್ರತಿಯೊಂದು ವ್ಯಕ್ತಿಯೂ ವೈಯಕ್ತಿಕಪ್ರಭೆಯಿಂದಕೂಡಿರುವಾಗ ಒಂದೊಂದೂ ಅದರ ವ್ಯಕ್ತಿತ್ವವನ್ನು ವಿಕಾಸಗೊಳಿಸಲಿಕ್ಕೇಬೇಕು. ಈ ಬಗೆಯ ವ್ಯಕ್ತಿವಿಕಾಸಕ್ಕೆ ಈ ಪ್ರಪಂಚವೇ ವಿಶಾಲವಾದ ಕಾರ್ಯಕ್ಷೇತ್ರ. ಇಲ್ಲಿ ನಡೆಯುವ ಪ್ರತಿಯೊಂದು ಸಂಘಟನೆಯೂ ವ್ಯಕ್ತಿಯ ವಿಕಾಸಕ್ಕೆ ಸಾಧಕವೂ, ಪೂರಕವೂ ಆಗಲಿದೆ. ಇಂತಹ ನಿತ್ಯಸತ್ಯ

ವಾದ ಕಾರ್ಯಕ್ಷೇತ್ರವನ್ನು ಬಿಟ್ಟರೆ ವ್ಯಕ್ತಿಗೆ ಬೇರೆ ಯಾವ ಮಾರ್ಗದಿಂದಲೂ ವೈಯಕ್ತಿಕವಿಕಾಸವು ಲಭಿಸಲಾರದು.

ಈ ವಿಕಾಸವಾದರೋ ವ್ಯಕ್ತಿಗೂ ಪ್ರಪಂಚಕ್ಕೂ ನೇರವಾಗಿ ಸಂಬಂಧಿಸಿರುತ್ತದೆ, ಇದನ್ನು ಮುಂದೆ ವಿಶಾಲವಾಗಿ ಪರ್ಯಾಲೋಚಿಸಲಾಗುವುದು. ಆದರೆ ವೈಯಕ್ತಿಕವಿಕಾಸಕ್ಕೆ ಪೂರ್ತಿಯಾಗಿ ಸಂಬಂಧಿಸಿರುವ ಚಿತ್ರವಿಚಿತ್ರವಾದ ಈ ಪ್ರಪಂಚವನ್ನು ಸ್ತ್ರೀಪುರುಷವ್ಯಕ್ತಿಗಳು ತುಚ್ಛವೆಂದೆಣಿಸಿಯೋ ಅಥವಾ ಅದೇ ತಮ್ಮ ಬಾಳಿನ ಸರ್ವಸ್ವವೆಂದು ಪರಿಗಣಿಸಿಯೋ ತಮ್ಮ ವಿಕಾಸವನ್ನು ಸಾಧಿಸಿಕೊಳ್ಳದೆ ಹೊಟ್ಟೆಬಟ್ಟೆಗಳ ಸಮಸ್ಯೆಗಳಲ್ಲಿಯೇ ತಮ್ಮ ಶಕ್ತಿಯನ್ನು ಕಳೆದುಕೊಳ್ಳುತ್ತಿರುವ ಶೋಚನೀಯ ಪರಿಸ್ಥಿತಿಯನ್ನು ಮಾತ್ರ ಇಲ್ಲಿ ನಿರ್ದೇಶಿಸಲಾಗಿದೆ. ಹೊಟ್ಟೆಯನ್ನು ತುಂಬಿಸಿಕೊಳ್ಳುವುದೇನೋ ಬಾಳಿನಲ್ಲಿ ಎಲ್ಲರಿಗೂ ಸಂಬಂಧಿಸಿದ ಅಂಶವೇ ಆಗಿದೆ. ಆದರೆ ಇದಕ್ಕಾಗಿ ವ್ಯವಸ್ಥಿತವಾದ ಕಾರ್ಯಕ್ರಮವನ್ನು ಕೈಗೊಳ್ಳುವುದು ಆವಶ್ಯಕ. ಬಾಳಿನಲ್ಲಿ ಈ ಬಗೆಯ ವ್ಯವಸ್ಥೆ ಇಲ್ಲದಿದ್ದರೆ ಹೊಟ್ಟೆ ಎಂದಿಗೂ ತುಂಬಲಾರದು. ಆತ್ಮನು ಪರಿಪೂರ್ಣನಾಗದವರೆಗೂ ಈ ಹೊಟ್ಟೆಯು ತುಂಬುವಂತೆಯೇ ಇಲ್ಲ. ಆತ್ಮನು ಎಲ್ಲಿಯವರೆಗೂ ದೇಹದ ಇಂದ್ರಿಯಗಳಿಗೆ ದಾಸನಾಗಿರುವನೋ ಅಲ್ಲಿಯವರೆಗೆ ಇಂದ್ರಿಯಗಳು ತಂದೊಡ್ಡುವ ಸುಖಸಂಪತ್ತುಗಳೆಲ್ಲವೂ ಈ ಹೊಟ್ಟೆಯನ್ನು ಎಂದೆಂದಿಗೂ ತುಂಬಿಸಲಾರವು. ಇಂದ್ರಿಯಗಳಿಂದ ಒದಗುವ ಭೋಗಭಾಗ್ಯಗಳೆಲ್ಲವೂ ಆತ್ಮದ ದಾಸ್ಯದಿಂದ ಬಚ್ಚಲನೀರಿನಂತೆ ವ್ಯರ್ಥವೆನಿಸತೊಡಗುವುವು. ಆತ್ಮಸುಖವಿಲ್ಲದವನು ಇಂದ್ರಿಯಗಳಿಗೆ ಗುಲಾಮನಾಗಿ ಎಷ್ಟು ವೈಭವದಿಂದ ಮೆರೆದರೂ ಅದೆಲ್ಲವೂ ಹೆಣದ ಶೃಂಗಾರವೇ ಆದೀತು. ಅದಕ್ಕಾಗಿಯೇ ಉಪನಿಷತ್ಕಾರರು

ಮಾನವನಿಗೆ ಜೀವನದಲ್ಲಿ "ಆಶಿಷ್ಠೋ ದ್ರಢಿಷ್ಠೋ ಬಲಿಷ್ಠಃ" ಎಂಬ ದಿವ್ಯವಾದ ಆದರ್ಶವನ್ನು ಮುಂದೆ ಇರಿಸಿರುವರು. ಮಾನವನು ದೇಹದ ಬಲವನ್ನೂ, ಮನಸ್ಸಿನ ದಾರ್ಢ್ಯವನ್ನೂ, ಆತ್ಮದ ಹಸಿವನ್ನೂ ಹೆಚ್ಚಹೆಚ್ಚಗೂ ಸಾಧಿಸಿಕೊಳ್ಳುತ್ತಿರಬೇಕು. ದೇಹದ ಬಲವಿದ್ದು ಮಾನಸಿಕಸ್ಥೈರ್ಯವಿಲ್ಲದಿದ್ದರೆ ಬಾಳು ಹಸನಾಗಲಾರದು. ಇವೆರಡೂ ಇದ್ದು ಅವನಿಗೆ ಪರಮಾತ್ಮನಾಗ ಬೇಕೆಂಬ ಹಿರಿಯ ಆಶೆ ಇಲ್ಲದಿದ್ದರೆ ಜೀವನವು ಸುಂದರವಾಗ ಲಾರದು. ಆತ್ಮನು ಈ ದೇಹಕ್ಕೆ ಬಂದು ಕಳೆದುಕೊಂಡಿರುವ ಪರಮೈಶ್ವರ್ಯವನ್ನು ಸಾಧಿಸಿಕೊಳ್ಳಲೇಬೇಕೆಂಬ ಆಶೆ ಅವನಿಗೆ ಇಲ್ಲವೇಹೋದರೆ ಅದೇ ಒಂದು ಬಗೆಯ ರೋಗವೆನಿಸುತ್ತದೆ. ಇದನ್ನು ಭವರೋಗವೆಂದೂ, ಮಲರೋಗವೆಂದೂ ಅನುಭವಿಗಳು ಕರೆಯುತ್ತಾರೆ. ಮಲವೆಂದರೆ ಆತ್ಮಶಕ್ತಿಯ ಸಂಕೋಚ. ಭವವೆಂದರೆ ಬಾಳಿನಲ್ಲಿ ಮತ್ತೆಮತ್ತೆ ಬಂದುಹೋಗುತ್ತಿರುವ ದುಸ್ಥಿತಿ. ಇವೆರಡೂ ಅವನಿಗೆ ತೊಲಗದೆ ಇದ್ದರೆ ಅವನು ಆರೋಗ್ಯ ವಂತನಾಗಲಾರನು. ಇವೆರಡನ್ನು ತೊಲಗಿಸಿಕೊಳ್ಳಲೇಬೇಕೆಂಬ ಬಯಕೆ ಯಾವನಲ್ಲಿ ಹೆಚ್ಚಾಗಿ ಇರುವುದೋ ಅವನೇ ಉಪನಿಷ ತ್ತಿನ ಮಾತಿನಲ್ಲಿ ಆಶಿಷ್ಠನೆನಿಸುವನು. ಅವನನ್ನೇ ಆರೋಗ್ಯ ವಂತನೆಂದು ಭಾವಿಸಲಾಗಿದೆ.

ಈ ರೀತಿಯಲ್ಲಿ ಮಾನವಸಾಮಾನ್ಯನೂ ಅನಾರೋಗ್ಯದಿಂದ ನರಳುತ್ತಲೇ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಿರುವನು. ಆರೋಗ್ಯವಂತನು ಹೊಟ್ಟೆಯನ್ನು ತುಂಬಿಸುವುದಕ್ಕೂ, ರೋಗಿಯು ಹೊಟ್ಟೆಯನ್ನು ತುಂಬಿಸುವುದಕ್ಕೂ ಬಹಳ ವ್ಯತ್ಯಾಸ ವಿದೆ. ರೋಗಿಯು ಭಯದಿಂದ ಮೋಹಗೊಂಡು ನರಳುತ್ತಲೇ ಆಹಾರವನ್ನು ಗತಿಯಿಲ್ಲದೆ ನುಂಗುವನು. ಆರೋಗ್ಯವಂತನು

ದೇಹದಲ್ಲೂ ಮನಸ್ಸಿನಲ್ಲೂ ಬುದ್ಧಿಯಲ್ಲೂ ಪ್ರಶಾಂತತೆಯಿಂದ ಸಂತೋಷಚಿತ್ತನಾಗಿ ಆಹಾರವನ್ನು ಲೋಕಕಲ್ಯಾಣಕ್ಕಾಗಿ ಈಶ್ವರನ ಪ್ರಸಾದವೆಂದು ಸೇವಿಸುವನು. ರೋಗಿ ಅಶಕ್ತತೆಯಿಂದ ಹೆಜ್ಜೆಹೆಜ್ಜೆಗೂ ಭಯಪಡುತ್ತಲೂ ಗೋಳಾಡುತ್ತಲೂ ಕಾಲ ಯಾಪನೆ ಮಾಡುವನು. ಆರೋಗ್ಯವಂತನು ಬಾಳಿನಲ್ಲಿ ತೃಪ್ತಿ ಎಂಬ ಸೌಭಾಗ್ಯವನ್ನು ಪಡೆದು ಶಾಂತತೆಯಿಂದ ಸಂತುಷ್ಟನಾಗಿ ಸಮಾಧಾನವೆಂಬ ಪರಮೈಶ್ವರ್ಯವನ್ನು ಅನುಭವಿಸುವನು. ಅಲ್ಲಿಗೆ ಸಾಮಾನ್ಯಮಾನವನು ಅನಾರೋಗ್ಯಪರಿಸ್ಥಿತಿಯಲ್ಲಿ ಭಯ-ಶೋಕ-ಮೋಹಗಳಿಂದ ನರಳುತ್ತಲೂ, ಅತ್ಯಾಚಾರ ಅನಾಚಾರ ದುರಾಚಾರಗಳಿಂದ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಲೂ ಇರುವನೆಂದು ಹೇಳಿದಹಾಗಾಯಿತು.

ಇಂತಹ ವಿಷಮಪರಿಸ್ಥಿತಿಯಾದರೋ ಮಾನವನಿಗೆ ಆತ್ಮವಸ್ತುವಿನ ಕಡೆ ಲಕ್ಷ್ಯವಿಲ್ಲದ್ದರಿಂದಲೇ ಉಂಟಾಗಿದೆ ಎಂದು ಹಿಂದೆ ತಿಳಿಸಿಯಾಗಿದೆ. ದೇವರು ಮಾನವನಿಗೆ ಕೊಟ್ಟಿರುವ ಆತ್ಮ ಮತ್ತು ಹೊಟ್ಟೆ ಇವೆರಡಕ್ಕೂ ಅವನು ಸಮಾನವಾದ ಗಮನವನ್ನು ಕೊಡದೇ ಇರುವುದೇ ಅವನ ಅಪರಾಧವೆನಿಸಿದೆ. ಇದಕ್ಕೆ ತಕ್ಕ ಶಿಕ್ಷೆಯೇ ಅವನು ಇಂದು ಅನುಭವಿಸುತ್ತಿರುವ ದೌರ್ಬಲ್ಯ. ಸಾಮಾನ್ಯಮಾನವನಿಗೆ ಆತ್ಮವನ್ನು ಹೇಗೆ ಬೆಳೆಸಬೇಕೆಂಬ ಅರಿವೇ ಇರುವುದಿಲ್ಲ. ತಿಳಿದವರು ಅದರ ಯೋಗ್ಯತೆಯನ್ನು ಇತರರಿಗೆ ತಿಳಿಸಬೇಕಾದ್ದು ಅವರ ಕರ್ತವ್ಯ. ಆದರೆ ಅಂತವರೂ ಸಹ ತಮ್ಮ ಹೃದಯವನ್ನು ದ್ವೇಷಮಾತ್ಸರ್ಯಗಳಿಂದ ಕೆಡಿಸಿಕೊಂಡಿರುವುದರಿಂದ ಅವರ ತಿಳಿವು ಅವರಲ್ಲಿಯೇ ನಶಿಸಿಹೋಗುತ್ತಲಿದೆ. ಯಾವನ ಜ್ಞಾನಸವಾಹಿನಿಯು ಲೋಕಕಲ್ಯಾಣಕ್ಕಾಗಿ ಹರಿಯುವುದಿಲ್ಲವೋ ಅವನು ಭೂಮಿಗೆ ಭಾರನೆನಿಸುವನೇ

ಹೊರತು ಅವನಿಂದ ಲೋಕಕಲ್ಯಾಣವಾಗುವಂತಿಲ್ಲ. ಯಾವನು ತನ್ನ ಕಲ್ಯಾಣವನ್ನು ಸಾಧಿಸಿಕೊಂಡು ಲೋಕಕಲ್ಯಾಣಕ್ಕಾಗಿ ತನ್ನ ಜ್ಞಾನಶಕ್ತಿಯನ್ನು ಉಪಯೋಗಿಸಿಕೊಳ್ಳುವುದಿಲ್ಲವೋ ಅವನು ಲೋಕಕಂಟಕನೆನಿಸುವನು. ಒಬ್ಬನನ್ನು ಆತ್ಮಕಲ್ಯಾಣದೊಡನೆ ಲೋಕಕಲ್ಯಾಣದ ಕಡೆಗೆ ತಿರುಗಿಸದ ಅಧಿಕಾರಿಯುಂತೂ ದುರಹಂಕಾರಿ ಎನಿಸಿ ಭೂಮಿಗೆ ಹೊರೆಯಾಗುವನು. ಅಧಿಕಾರಿಯು ಶಕ್ತನೂ ಭಕ್ತನೂ ಆಗಿದ್ದರೆಯೇ ಅವನಿಂದ ಲೋಕಕಲ್ಯಾಣವಾದೀತು. ಆದರೆ ಅವನು ಅವಿನೀತನೂ, ದುರಭಿಮಾನಿಯೂ ಆಗಿದ್ದರೆ ಅವನಿಂದ ಯಾರಿಗೂ ಹಿತವಾಗುವುದಿಲ್ಲ. ಹೀಗೆ ವಿದ್ಯಾವಂತರು ವಿನಯಹೀನರಾದರು; ಅಧಿಕಾರಿಗಳು ದುರ್ವರ್ತನಶೀಲರಾದರು. ಹೀಗೆ ಸಾಮಾನ್ಯಮಾನವನ ಪರಿಸ್ಥಿತಿ ಉತ್ತಮಗೊಳ್ಳಲಿಕ್ಕೆ ಸಾಧ್ಯವೇ ಇಲ್ಲ. ಇಂದು ಅವನ ಪರಿಸ್ಥಿತಿ ಇಷ್ಟು ಭೀಕರವೂ, ವಿಷಮವೂ ಆಗಿ ಕಾಳ್ಗಿಚ್ಚಿನಂತೆ ಅವನನ್ನು ಕಾಡಿಸುತ್ತಲಿವೆ. ಇದೆಲ್ಲಕ್ಕೂ ಅವನ ಅಜ್ಞಾನವೇ ಮೂಲವೆನಿಸಿದೆ. ಅವನು ಜ್ಞಾನಸ್ವರೂಪನಾದರೂ ಅವನ ಜ್ಞಾನದ ವ್ಯಾಪ್ತಿ ಅಜ್ಞಾನದಿಂದ ಮುಚ್ಚಿಹೋಗಿದೆ. ಆದ್ದರಿಂದ ಅವನ ಪರಿಸ್ಥಿತಿ ಹೀಗೆ ಚಿಂತಾಜನಕವಾಗಿದೆ.

## ವ್ಯವಹಾರ ನಿರ್ವಹಣಕ್ರಮ

ಹೀಗೆ ಮಾನವನು ವಿಷಮಪರಿಸ್ಥಿತಿಯಲ್ಲಿ ಇರುವುದರಿಂದಲೇ ಅವನು ವ್ಯವಹಾರಗಳನ್ನು ನಿರ್ವಹಿಸುವ ಚಾತುರ್ಯವನ್ನು ಅರಿತಿಲ್ಲ. ಲೋಕದಲ್ಲಿ ಹುಟ್ಟಿರುವವರೆಲ್ಲರೂ ವ್ಯವಹಾರಗಳನ್ನು ಹೇಗೋ ನಡೆಸುತ್ತಿರುವರೇ ಹೊರತು ನೈಪುಣ್ಯದಿಂದ ನಡೆಸುತ್ತಿಲ್ಲ. ವ್ಯವಹಾರಗಳು ಶ್ವಾಸೋಚ್ಛ್ವಾಸಗಳಂತೆ ಅನಾಯಾಸ

ವಾಗಿ ಲೀಲೆಯಿಂದಲೇ ನಡೆಯಬೇಕು. ಮಾನವನಲ್ಲಿ ಅಡಗಿರುವ ವ್ಯವಹಾರಕೌಶಲವೆಂದರೆ ಇದೇಯೇ. ಧೀರನು ಆತ್ಮಗೌರವ ದಿಂದ ವ್ಯವಹರಿಸಿದರೆ ಹೇಡಿಯು ದೈನ್ಯದಿಂದ ವ್ಯವಹರಿಸುವನು. ಕರ್ಮಯೋಗಿಯು ಪ್ರತಿಯೊಂದು ವ್ಯವಹಾರವನ್ನೂ ತನ್ನ ಕರ್ತವ್ಯವೆಂದೂ, ಈಶ್ವರನ ಸೇವೆ ಎಂದೂ ಭಾವಿಸಿ ಫಲಾಪೇಕ್ಷೆ ಯಿಲ್ಲದೆ ನಡೆಸಿದರೆ ಕರ್ಮಿಯು ಎಲ್ಲವನ್ನೂ ತನ್ನ ಹೊಟ್ಟೆಬಟ್ಟೆ ಗಳಿಗಾಗಿಯೇ ನಡೆಸುತ್ತ ದುಃಖಪಡುವನು. ಭಗವದಾರಾಧನ ದಂತೆ ಪ್ರತಿಯೊಂದು ಕರ್ಮವೂ ಯೋಗಿಗೆ ಮಾನ್ಯವೆನಿಸಿದರೆ ಕರ್ಮಿಗೆ ಅದೆಲ್ಲವೂ ಉದರಪೋಷಣವೆನಿಸುತ್ತದೆ. ಕರ್ಮ ಯೋಗಿಯು ಯಾರಿಗೆ ಏನನ್ನು ಕೊಟ್ಟರೂ ತನ್ನೊಳಗಿರುವ ಈಶ್ವರನ ಪ್ರೇರಣೆಯಂತೆ ಅದು ನಡೆಯಿತೆಂದು ಸಂತೋಷಪಡು ವನು. ತನ್ನಿಂದ ಸಹಾಯವನ್ನು ಪಡೆದವನ ಬಗ್ಗೆ ಅವನು ಕೃತಜ್ಞತೆಯನ್ನು ತಾಳುವನು. ಅವನಿಂದ ತಾನು ಯಾವ ಬಗೆಯ ಫಲವನ್ನೂ ಬಯಸದೆ ಅವನೊಳಗಿರುವ ಈಶ್ವರನಿಗೆ ಸಂತೋಷವಾಗಲೆಂಬುದೇ ಅವನ ಬಯಕೆ. ಯಾರೊ ಬ್ಬರಿಗೆ ಏನೊಂದಿಷ್ಟು ಸೇವೆಯನ್ನು ಸಲ್ಲಿಸುವ ಅವಕಾಶವು ದೊರೆತರೂ ಅವನು ಅದಕ್ಕಾಗಿ ಈಶ್ವರನಿಗೆ ಕೃತಜ್ಞನಾಗಿರುವನು. ಹೀಗೆ ವ್ಯವಹಾರಗಳನ್ನು ನಡೆಸುವಾಗ ಜಾಣನು ಫಲವನ್ನು ಬಯಸದೆ ಅದೆಲ್ಲವನ್ನೂ ತನ್ನ ಕರ್ತವ್ಯವೆಂದು ಭಾವಿಸುವನು. ವ್ಯವಹಾರಗಳನ್ನು ನಿರ್ವಹಿಸುವುದರಲ್ಲಿ ಅಡಗಿರುವ ಜಾಣತನ ವೆಂದರೆ ಇದೇಯೆ. "ಯೋಗಃ ಕರ್ಮಸು ಕೌಶಲಂ" ಎಂದು ಈ ಬಗೆಯ ವ್ಯವಹಾರನೈಪುಣ್ಯವನ್ನು ಯೋಗವೆಂದು ಭಗವಂತನು ಗೀತೆಯಲ್ಲಿ ಅಪ್ಪಣೆಮಾಡಿದ್ದಾನೆ.

ಈ ಯೋಗಸಾಧನೆ ಎಲ್ಲರಿಗೂ ಸಾಧ್ಯವಾಗುವುದಿಲ್ಲ. ಧೀರ

ನೊಬ್ಬನೇ ಇದನ್ನು ನಿರ್ವಹಿಸಬಲ್ಲನು. ನಾನೆಂಬ ಅಹಂಕಾರ ಸಾಗರದಲ್ಲಿ ಮುಳುಗಿದವರು ಎಂದೆಂದಿಗೂ ಮೇಲೆ ಏಳಲಾರರು. ಅಹಂಕಾರವೆಂಬ ಪಿಶಾಚಿಯು ಕೈಗೆ ಸಿಕ್ಕಿದವರಿಗೆ ಯೋಗಸಿದ್ಧಿ ಎಂದಿಗೂ ಅಳವಡಲಾರದು. ಯಾವನು ಪ್ರಕೃತಿಸಂಬಂಧವಾದ ಸಣ್ಣ ಅಹಂಕಾರಕ್ಕೆ ಬಲಿಬೀಳುವನೋ ಅವನು ಎಂದಿಗೂ ಕರ್ಮಯೋಗಿಯಾಗಲಾರನು. ಯೋಗದ ಮರ್ಮವನ್ನು ಅರಿಯದೆ ವ್ಯವಹರಿಸುವವರೆಲ್ಲರೂ ಕರ್ಮಿಗಳೆನಿಸುವರೇ ಹೊರತು ಕರ್ಮಯೋಗಿಗಳಾಗಲಾರರು. ಲೋಕದ ಮಾನವರೆಲ್ಲರೂ ಕರ್ಮಿಗಳಾಗಿ ಕೆಲವರು ಮಾತ್ರವೇ ಕರ್ಮಯೋಗಿಗಳಾಗಿರುವರು. ಕರ್ಮಿಗಳು ತಾವು ಮಾಡುವ ಕೆಲಸಗಳಿಗೆ ಅಂಟಿಕೊಂಡಿರುವರು; ಆದರೆ ಕರ್ಮಯೋಗಿಗಳು ಯಾವುದಕ್ಕೂ ಅಂಟದಂತೆ ನಿರ್ಲಿಪ್ತರೂ, ಅನಾಸಕ್ತರೂ ಆಗಿದ್ದು ವ್ಯವಹರಿಸುವರು. ಯಾವನು ಹೊಟ್ಟೆಯಂತೆಯೇ ಆತ್ಮವನ್ನೂ ಬೆಳಸಿಕೊಂಡಿರುವನೋ, ಹೊಟ್ಟೆಗೆ ಆಹಾರವನ್ನೊದಗಿಸುವಂತೆ ಆತ್ಮನಿಗೂ ಆಹಾರವನ್ನು ಪ್ರತಿನಿತ್ಯವೂ ಒದಗಿಸುತ್ತಿರುವನೋ ಅವನು ಅನಾಸಕ್ತನಾಗಿಯೇ ಕರ್ಮಗಳನ್ನು ನಡೆಸಿಕೊಂಡುಬರುವನು. ಇವನು ಎಲ್ಲರಂತೆ ತಿಂದು ಉಂಡು ವ್ಯವಹರಿಸುತ್ತಿದ್ದರೂ ಇವನ ವರ್ತನೆಯೇ ಬೇರೆ ವಿಧವಾಗಿರುತ್ತದೆ. ಇವನು ಆತ್ಮಕಲ್ಯಾಣವನ್ನು ಸಾಧಿಸಿರುವುದರಿಂದ ಪ್ರಕೃತಿಯ ದುಷ್ಪ್ರೇರಣೆಗೆ ವಶನಾಗುವುದಿಲ್ಲ. ಯಾವನು ಶಕ್ತನೋ ಧೀರನೋ ಪೂರ್ಣಪ್ರಜ್ಞನೋ ಅವನಲ್ಲಿ ಪ್ರಕೃತಿಯ ಅಹಂಕಾರವು ಎಂದೆಂದಿಗೂ ಪ್ರವೇಶಿಸಲಾರದು. ಯಾವನಲ್ಲಿ ಆತ್ಮಶಕ್ತಿಯ ಪ್ರಭೆಯೇ ವ್ಯಾಪಿಸಿರುವುದಿಲ್ಲವೋ ಅಂತಹ ರೋಗಿಯೇ ಪ್ರಕೃತಿಯ ಅಹಂಕಾರಕ್ಕೆ ವಶನಾಗುವನು. ಧೀರನನ್ನು ಪ್ರಕೃತಿಯು ಎಂದಿಗೂ ಅಳ್ಳಾಡಿಸಲಾರದು. ಯಾವನು

ತನಗೂ ಪ್ರಕೃತಿಗೂ ಇರುವ ವಿವೇಕವನ್ನು ತಿಳಿದಿರುವನೋ ಅವನಿಗೆ ಪ್ರಕೃತಿಯು ದಾಸಿಯಾಗುವುದು. ಯಾವನು ಪ್ರಕೃತಿಯ ಭೋಗವನ್ನೇ ಬಯಸುತ್ತ ಇಂದ್ರಿಯಗಳಿಗೆ ದಾಸನಾಗಿರುವನೋ ಅವನು ಹೆಜ್ಜೆಹೆಜ್ಜೆಗೂ ಸಂಕಟಕ್ಕೀಡಾಗುವನು.

ಹೀಗೆ ನೈಪುಣ್ಯವನ್ನು ಅರಿಯದೆ ಯಾವನು ವ್ಯವಹರಿಸುವನೋ ಅವನಿಗೆ ಅವನ ವ್ಯವಹಾರವೇ ಮಾರಕವಾಗುವುದು. ಇದರಲ್ಲಿ ನೈಪುಣ್ಯವೆಂದರೆ ಪ್ರಕೃತಿಸಂಬಂಧವಾದ ಅಹಂಕಾರವನ್ನು ತೊರೆದು ವ್ಯವಹರಿಸುವುದೇ ಆಗಿದೆ. ಅಹಂಕಾರದಿಂದ ವ್ಯವಹರಿಸುವವನೇ ರಾಗದ್ವೇಷಗಳ ಸುಳಿಗೆ ಸಿಲುಕಿ ಕೆಲವರನ್ನು ಮೋಹಿಸುತ್ತಲೂ, ಕೆಲವರನ್ನು ಹೀಯಾಳಿಸುತ್ತಲೂ ಅಶಾಂತನಾಗಿರುವನು. ವರ್ಧಿಷ್ಣುಗಳಿಗೆ ರಾಗದ್ವೇಷಗಳಿಗಿಂತ ಬೇರೆ ಶತ್ರುವಿರಲಾರವು. ಇಂತಹ ನೀಚಶತ್ರುಗಳಿಗೆ ವಶವಾದವನು ಹೇಗೆ ವ್ಯವಹಾರದಿಂದ ಸುಖಶಾಂತಿಗಳನ್ನು ಪಡೆದಾನು? ಯಾವನು ತನ್ನ ಎಲ್ಲಾ ವ್ಯವಹಾರಗಳಲ್ಲೂ "ನಾನು" ಎಂಬ ಉತ್ತಮಪುರುಷದ ಪ್ರಯೋಗವನ್ನು ತೊರೆಯುವನೋ ಅವನೇ ಸುಖಿಯೂ, ಶಾಂತನೂ ಆಗುವನು. ನಾನೆಂಬ ಪ್ರಯೋಗವೇ ಎಲ್ಲ ದುಃಖಗಳ ಮೂಲ; ಸರ್ವರೋಗಗಳ ಆವಾಸಭೂಮಿ. ಇದನ್ನು ತೊರೆಯಬೇಕಾದರೆ ಆತ್ಮಜ್ಞಾನವು ಅತ್ಯವಶ್ಯಕ.

ತನ್ನನ್ನು ತಾನು ತಿಳಿಯದವನೇ ದುರಹಂಕಾರದಿಂದ ಮೆರೆಯುವನು. ಒಬ್ಬನು ತನ್ನನ್ನು ನಿರಾಕಾರಚೇತನನೆಂದು ತಿಳಿದರೆ ಮಾತ್ರವೇ ತಾನು ಕರ್ತನಲ್ಲವೆಂದು ತಿಳಿಯಬಲ್ಲನು. ವ್ಯವಹಾರಗಳು ನಡೆಯಬೇಕಾದರೆ ಈಶ್ವರ, ದೇಹ, ಇಂದ್ರಿಯಗಳು ಕರಣಗಳು ಇವೆಲ್ಲವೂ ಎಷ್ಟು ಆವಶ್ಯಕವೋ ಆತ್ಮವೂ ಅಷ್ಟೇ ಆವಶ್ಯಕ. ಆದರೂ ಆತ್ಮಜ್ಞಾನವಿಲ್ಲದವನು ದೇಹೇಂದ್ರಿಯಾ

ದ್ಯುಪಕರಣಗಳನ್ನು ಗಮನಿಸದೆ ತನ್ನೊಬ್ಬನಿಂದಲೇ ಎಲ್ಲವೂ ನಡೆಯುವುದೆಂದು ತಪ್ಪಾಗಿ ತಿಳಿಯುವನು. ಈ ಬಗೆಯ ಅವಿವೇಕವೇ ಮಾನವನ ಎಲ್ಲಾ ಅವ್ಯವಸ್ಥೆಗಳಿಗೂ ಮೂಲ ಕಾರಣ. ಅನೇಕ ಸಾಧನಗಳ ಮೂಲಕ ನಡೆಯುವ ವ್ಯವಹಾರ ಗಳಿಗೆ ಜೀವಾತ್ಮನು ತಾನೊಬ್ಬನೇ ಕರ್ತನೆಂದು ಭಾವಿಸುವುದು ಮಹಾಪರಾಧ. ಈ ಬಗೆಯ ಸ್ವಯಂಕೃತಾಪರಾಧಕ್ಕೆ ಶಿಕ್ಷೆಯೇ ಈ ದುರಹಂಕಾರವರ್ತನೆ. ಮಾನವನು ಕೆಡಲಿಕ್ಕೆ ಅಹಂಕಾರ ಕ್ಕಿಂತ ಬೇರೆ ಸಾಧನವೇ ಬೇಕಿಲ್ಲ. ಒಂದು ನಿಮಿಷದ ದುರ್ವರ್ತ ನೆಯೇ ಜೀವನವೆಲ್ಲವನ್ನೂ ಹದಗೆಡಿಸಬಲ್ಲದು. ಕೊಡಹಾಲನ್ನು ಕೆಡಿಸಲು ಒಂದು ತೊಟ್ಟು ಹುಳಿಯೇ ಸಾಕು. ಹಾಗೆ ಮಾನವ ನನ್ನು ಹದಗೆಡಿಸಲು ಒಮ್ಮೆ ಆಚರಿಸುವ ಅಹಂಕಾರವೇ ಸಾಕು.

ಹೀಗೆ ಆತ್ಮಜ್ಞಾನವಿಲ್ಲದವನು ಹೊಟ್ಟೆಗಾಗಿ ಎಷ್ಟೇ ವ್ಯವಹರಿ ಸಿದರೂ ನೆಮ್ಮದಿಯಿಲ್ಲದೆ ಸಂಕಟಪಡುತ್ತಿರುವನು. ಅವನು ಒಮ್ಮೆ ಸಂತುಷ್ಟನೂ, ಒಮ್ಮೆ ಕುಪಿತನೂ ಆಗಿರುವಂತೆಯೇ ಮತ್ತೊಮ್ಮೆ ಕೋಪಸಂತೋಷಗಳೆರಡರಿಂದಲೂ ಕೂಡಿರುವನು.

> ಕ್ಷಣೇ ತುಷ್ಟಃ ಕ್ಷಣೇ ರುಷ್ಟಃ ತುಷ್ಟೋ ರುಷ್ಟಃ ಕ್ಷಣೇ ಕ್ಷಣೇ।
> ಅವ್ಯವಸ್ಥಿತಚಿತ್ತಸ್ಯ ಪ್ರಸನ್ನೋಽಪಿ ಭಯಂಕರಃ॥

ಮನಸ್ಸು ಯಾವನಿಗೆ ವ್ಯವಸ್ಥೆಯಿಂದಿರುವುದಿಲ್ಲವೋ ಅವನು ಪ್ರಸನ್ನನಾದರೂ ಭೀಕರನೇ ಆಗಿರುವನು. ಅಂತವನು ನಂಬಿಕೆಗೆ ಅರ್ಹನಾಗಲಾರನು. ಆತ್ಮಜ್ಞಾನಸಂಪನ್ನನೇ ತುಂಬಿದ ಕೊಡ ದಂತೆ ನಿರ್ವಿಕಾರನಾಗಿರಬಲ್ಲನು. ಅಂತವನು ನಡೆಸುವ ವ್ಯವಹಾರ ಗಳೆಲ್ಲವೂ ಫಲದಾಯಕವೂ, ಲೋಕಹಿತವೂ ಆಗಿರುತ್ತವೆ. ಪರಾರ್ಥವಾಗಿ ವ್ಯವಹರಿಸುವ ನಿರ್ಮಲಹೃದಯರೆಲ್ಲರೂ ಯಾವಾ ಗಲೂ ಸಂತುಷ್ಟರೇ ಆಗಿರುವರು.

ಸದಾ ಸಂತುಷ್ಟಚಿತ್ತಾನಾಂ ಸಂಪದಸ್ತು ಪದೇಪದೇ।
ಸದಾಽಸಂತುಷ್ಟಚಿತ್ತಾನಾಂ ವಿಪದಸ್ತು ಪದೇಪದೇ॥

ಮನಸ್ಸಂತೋಷವೇ ಸರ್ವಸೌಭಾಗ್ಯಗಳ ಮೂಲ. ಮನಸ್ಸಿಗೆ ಸಂತೋಷವಿಲ್ಲದಿರುವಿಕೆಯೇ ಸಮಸ್ತವಿಪತ್ತುಗಳಿಗೆ ತೌರುಮನೆ ಎನಿಸುವುದು. ಎಲ್ಲಾ ಆಭರಣಗಳಿಂದಲೂ ಅಲಂಕರಿಸಿದ ಹೆಣ್ಣಿಗೆ ಮಂಗಳಸೂತ್ರವಿಲ್ಲದೆ ಇದ್ದರೆ ಹೇಗೆ ಸೌಂದರ್ಯವಿರುವುದಿಲ್ಲವೋ ಹಾಗೆ ಎಷ್ಟೇ ವಿದ್ಯಾವಂತನಾದರೂ ಮಾನವನಿಗೆ ಆತ್ಮಜ್ಞಾನವೊಂದಿಲ್ಲದಿದ್ದರೆ ಅವನ ವಿದ್ಯೆಗಳೆಲ್ಲವೂ ನಿರರ್ಥಕವೇ ಆಗುತ್ತವೆ. ಹೀಗೆ ಆತ್ಮಜ್ಞಾನದ ಮಹತ್ತ್ವವನ್ನು ಅಷ್ಟಿಷ್ಟೆಂದು ಮಾತಿನಲ್ಲಿ ಹೇಳಲಿಕ್ಕಾಗುವುದಿಲ್ಲ.

ಕಂಠಸೂತ್ರಂ ವಿನಾ ನಾರೀ ಸರ್ವಾಲಂಕಾರಭೂಷಿತಾ।
ಆತ್ಮಜ್ಞಾನವಿಹೀನಸ್ಯ ವಿದ್ಯಾಜಾಲಂ ನಿರರ್ಥಕಂ॥

ಹೀಗೆ ಆತ್ಮನನ್ನು ಉದಾಸೀನಮಾಡುತ್ತಿರುವುದರಿಂದ ಮಾನವನು ಹೊಟ್ಟೆಬಟ್ಟೆಗಳಿಗಾಗಿ ಎಷ್ಟು ದುಡಿದರೂ ಅವನ ದುಡಿಮೆ ಎಲ್ಲವೂ ಬಚ್ಚಲರೊಚ್ಚಿನಂತೆ ಅಸಹ್ಯವಾಗಿ ಕಾಣುತ್ತಿರುವುದು. ಮಾನವನು ತನ್ನನ್ನು ಆತ್ಮನೆಂದೂ, ತನ್ನೊಳಗೆ ಪರಮಾತ್ಮನಿರುವನೆಂದೂ ತಿಳಿದು ಆ ಪರಮಾತ್ಮನ ಪ್ರೀತ್ಯರ್ಥವಾಗಿ ವ್ಯವಹರಿಸುವುದೇ ಈ ವ್ಯವಹಾರದಲ್ಲಿ ಅಡಗಿರುವ ರಹಸ್ಯ. ಇದನ್ನು ತಿಳಿಯದವನು ಎಷ್ಟುಕಾಲ ವ್ಯವಹರಿಸಿದರೂ ಕೊನೆಯತನಕ ದೀನನೂ, ದರಿದ್ರನೂ ಆಗಿಯೇ ಉಳಿಯುವನು. ಲೋಕದ ಮಾನವರಲ್ಲಿ ಅನೇಕರು ಈ ಸ್ಥಿತಿಯಲ್ಲಿ ವ್ಯವಹರಿಸುತ್ತಿರುವರು. ಇದನ್ನು ಅಂಧವ್ಯವಹಾರವೆಂದು ಜ್ಞಾನಿಗಳು ಕರೆಯುತ್ತಾರೆ. "ಗತಾನುಗತಿಕೋ ಲೋಕಃ ನ ಲೋಕಃ ಪಾರಮಾರ್ಥಿಕಃ" ಒಬ್ಬನು ಮಾಡಿದ್ದನ್ನು ಅವಿವೇಕದಿಂದ ಅನುಸರಿಸುವುದು ಈ

ಲೋಕದ ಸ್ವಭಾವ. ಒಬ್ಬನ ಸ್ವಭಾವಕ್ಕೆ ಹೊಂದಿಕೆಯಾದದ್ದು ಮತ್ತೊಬ್ಬನ ಸ್ವಭಾವಕ್ಕೆ ಹೊಂದದೇ ಇರಬಹುದು. ಹೀಗೆ ಅಂಧಪರಂಪರೆಯಂತೆ ಒಬ್ಬನ ಮಾರ್ಗವನ್ನು ಮತ್ತೊಬ್ಬನು ಅವಿವೇಕದಿಂದ ಅನುಸರಿಸುವುದು ಯುಕ್ತವೆನಿಸಲಾರದು. ಈ ಬಗೆಯ ಅವಿವೇಕವೇ ಮಾನವನ ಶಕ್ತಿಸಂಕೋಚವೆನಿಸಿದೆ.

## ಶಕ್ತಿಸಂಕೋಚ—ಅದರ ಸ್ವರೂಪ

ಮಾನವನಲ್ಲಿ ಇರಬೇಕಾದ ಶಕ್ತಿ ಎಂತಹದು ? ಅದು ಅವನಲ್ಲಿ ಏಕೆ ಸಂಕೋಚಗೊಂಡಿದೆ? ಮತ್ತು ಹೇಗೆ ಸಂಕೋಚಗೊಂಡಿದೆ? ಅವನಿಗೂ ಶಕ್ತಿಗೂ ಇರುವ ಸಂಬಂಧವೆಂತಹುದು ? ಆ ಶಕ್ತಿ ಅವನಿಗೆ ಎಲ್ಲಿಂದ ಹೇಗೆ ಬಂದಿತು ? ಇವುಗಳನ್ನು ಪರ್ಯಾಲೋಚಿಸಿದರೆ ಮಾನವನಿಗೆ ವಿವೇಕವುಂಟಾಗುವುದು ಸಹಜ. ಮಾನವನ ಶಕ್ತಿ ಪರಮಾತ್ಮನಿಂದ ಬಂದದ್ದು. "ತನು ನಿನ್ನದು, ಜೀವ ನಿನ್ನದು, ಮನ ನಿನ್ನದು" ಎಂದು ಕನಕದಾಸರು ತಮ್ಮ ಕೀರ್ತನೆಯಲ್ಲಿ ಹಾಡಿರುವರು. ಜೀವನು ಪರಮಾತ್ಮನ ಅನುಗ್ರಹದಿಂದ ಬಂದಿರುವಂತೆಯೇ ದೇಹವೂ ಅವನ ಮಾಯಾಶಕ್ತಿಯ ಪ್ರಸಾದದಿಂದಲೇ ಆಗಿರುತ್ತದೆ. ದೇಹವನ್ನು ತಾಯ್ತಂದೆಗಳ ಶುಕ್ಲಶೋಣಿತಗಳ ಸಂಯೋಗದಿಂದ ಮಾಯೆ ಬೆಳೆಸಿದೆ. ಆದ್ದರಿಂದಲೇ ಇದನ್ನು "ಪ್ರಕೃತಿ" ಎಂದು ಕರೆಯಲಾಗಿದೆ. ಪ್ರಕೃತಿ ಎಂದರೆ ಅದ್ಭುತವಾದ ರಚನೆ. ಗಂಡಸಿನ ಒಂದು ತೊಟ್ಟು ವೀರ್ಯದಿಂದಲೂ, ಹೆಣ್ಣಿನ ಒಂದು ತೊಟ್ಟು ರಕ್ತದಿಂದಲೂ ಇಂತಹದೊಂದು ಸರ್ವಾಂಗಸುಂದರವಾದ ದೇಹವು ನಿರ್ಮಿತವಾಗಿರುವುದೇ ಒಂದು ಅದ್ಭುತರಚನೆ. ಆದ್ದರಿಂದಲೇ ಇದು "ಪ್ರಕೃತಿ" ಎನಿಸಿದೆ. ಇದೇ ಎಲ್ಲಾ ಬಗೆಯ ಆಕರ್ಷಣೆಗಳಿಗೂ ಆಶ್ರಯ

ವಾಗಿರುವುದರಿಂದ ಇದನ್ನು "ಮಾಯೆ" ಎಂದು ಕರೆಯುತ್ತಾರೆ. ಈ ದೇಹದಲ್ಲಿ ವ್ಯಾಪಿಸಿರುವ ಮನಸ್ಸು ಎಲ್ಲಾ ಆಕರ್ಷಣಗಳಿಗೂ ತೌರೂರಾದ್ದರಿಂದ ಅದನ್ನು ಮಾಯೆ ಎಂದು ಕರೆಯುವುದೇ ಹೆಚ್ಚು ರೂಢಿಯಲ್ಲಿದೆ. ಇದರೊಂದಿಗೆ ಬುದ್ಧಿಯೂ ಸೇರಿರುವುದರಿಂದ ಇದು ಜೀವಾತ್ಮನಿಗೆ ಯುಕ್ತಾಯುಕ್ತವಿವೇಚನೆಗೆ ಸಾಧನವಾಗಿದೆ. ಆದ್ದರಿಂದ ಇದು ಪ್ರಧಾನವೆನಿಸಿದೆ.

ಇದು ಪರಮಾತ್ಮನ ಚಿತ್‌ಶಕ್ತಿಯ ಸಂಕೋಚವೇ ಆದ್ದರಿಂದ ಚಿತ್ತವೆನಿಸಿದೆ. ಪರಮಾತ್ಮನ ಚಿತ್‌ಶಕ್ತಿಯು ಅವನಲ್ಲಿ ಪ್ರಾಣರೂಪದಿಂದ ಅಡಗಿದೆ. ಇದರಲ್ಲಿ ಅವನು ಲೀನನಾಗಿಯೇ ಆತ್ಮಾನಂದವನ್ನು ಅನುಭವಿಸುವನು. ಇದನ್ನೇ ಶ್ರುತಿಯು "ಪ್ರಾಣಾರಾಮಂ ಮನಆನಂದಂ" ಎಂದು ಪ್ರಶಂಸಿಸಿದೆ. ಈ ಪ್ರಾಣಶಕ್ತಿಯನ್ನು ಅವನಿಂದ ಎಂದಿಗೂ ಬೇರ್ಪಡಿಸಲಾಗುವುದಿಲ್ಲ. ಶಬ್ದದಲ್ಲಿ ಅರ್ಥವಿರುವಂತೆ, ಹೂವಿನಲ್ಲಿ ಗಂಧವಿರುವಂತೆ, ಹಾಲಿನಲ್ಲಿ ರುಚಿ ಇರುವಂತೆ, ಚಂದ್ರನಲ್ಲಿ ಪ್ರಕಾಶವಿರುವಂತೆ ಪರಮಾತ್ಮನಲ್ಲಿರುವ ಶಕ್ತಿ ಅವನನ್ನೇ ಆಶ್ರಯಿಸಿಕೊಂಡಿದ್ದು ಅವನಿಗೆ ವಿನೋದಭೂಮಿ ಎನಿಸಿರುವುದು. ಇಂತಹ ಚಿತ್‌ಶಕ್ತಿಯ ಒಂದು ಅಂಶವೇ ಮಾಯಾಶಕ್ತಿ ಎನಿಸಿ ಜಗತ್ತನ್ನು ಆವರಿಸಿರುವುದು. ಇದರ ಮೊದಲನೆಯ ಪರಿಣಾಮವೇ ಚಿತ್ತಶಕ್ತಿ. ಇದು ಚಿತ್‌ಶಕ್ತಿಯ ಸಂಕುಚಿತರೂಪ. ಚಿತ್‌ಶಕ್ತಿ ಪರಮಾತ್ಮನಂತೆ ಸತ್ಯಜ್ಞಾನ ಆನಂದರೂಪವಾಗಿದ್ದರೆ ಚಿತ್ತಶಕ್ತಿಯು ಸತ್ತ್ವರಜಸ್ತಮೋರೂಪವಾಗಿದೆ. ಈ ಚಿತ್ತಶಕ್ತಿಯನ್ನು ಬುದ್ಧಿಶಕ್ತಿ ಎಂದೂ ಕರೆಯಲಾಗಿದೆ. ಅಲ್ಲಿಗೆ ಜೀವನು ಬುದ್ಧಿಶಕ್ತಿಯೊಡಗೂಡಿರುವನೆಂದು ಹೇಳಿದಂತಾಯಿತು.

ಪರಮಾತ್ಮನ ಶಕ್ತಿ ಸತ್ಯಜ್ಞಾನಾನಂದಮಯವಾಗಿದ್ದರೆ ಜೀವಾ

ತ್ಮನ ಶಕ್ತಿ ಸತ್ತ್ವರಜಸ್ತಮೋಗುಣಾತ್ಮಕವಾಗಿದೆ. ಪರಮಾತ್ಮ ನಂತೆಯೇ ಜೀವನೂ ಸಹ ಸತ್ಯನೆನಿಸಿ ಜ್ಞಾನಸ್ವರೂಪದಿಂದ ಆನಂದಮಯನೇ ಆಗಿರುವನು. ಆದರೆ ಇವನ ಶಕ್ತಿ ಎನಿಸಿದ ಬುದ್ಧಿಯು ಒಮ್ಮೆ ಸಾತ್ತ್ವಿಕವೂ, ಒಮ್ಮೆ ರಾಜಸವೂ, ಒಮ್ಮೆ ತಾಮಸವೂ ಆಗುತ್ತದೆ. ಪರಮಾತ್ಮನ ಶಕ್ತಿ ಯಾವಾಗಲೂ ಒಂದೇ ಬಗೆಯಾಗಿರುವುದರಿಂದ ಸತ್ಯವೆನಿಸಿದೆ. ಆದರೆ ಜೀವಶಕ್ತಿ ಕಾಲದೇಶಪರಿಸ್ಥಿತಿಗಳಿಗನುಗುಣವಾಗಿ ಬದಲಾವಣೆ ಹೊಂದು ತ್ತದೆ. ಪರಮಾತ್ಮನಂತೆಯೇ ಜೀವಾತ್ಮನೂ ಸತ್ಯಸ್ವರೂಪನೇ ಆಗಿದ್ದರೂ ಇವನ ಶಕ್ತಿಯು ತ್ರಿಗುಣಾತ್ಮಕವಾದ್ದರಿಂದ ಇವನ ವರ್ತನೆಯಲ್ಲಿ ವಿಕಾರಗಳು ಸಂಭವಿಸುತ್ತವೆ. ಪರಮಾತ್ಮನು ಹುಟ್ಟುಸಾವುಗಳಿಲ್ಲದೆ ಯಾವಾಗಲೂ ಸತ್ಯವೆನಿಸಿ ಮಾಯಾಶಕ್ತಿ ಯನ್ನು ವಶಪಡಿಸಿಕೊಂಡಿರುವುದರಿಂದ ಅವನ ಸ್ವಭಾವವೆನಿಸಿದ ಇಚ್ಛಾಶಕ್ತಿಯು ಅದ್ಭುತವೂ ಅನಂತವೂ ಆಗಿದೆ. ಆದರೆ ಅವನಿಗೆ ನೇರವಾಗಿ ಸಂಬಂಧಿಸಿರುವ ಜೀವಾತ್ಮನಲ್ಲಿ ಅಂತಹ ವಿಶಾಲವಾದ ಇಚ್ಛಾಶಕ್ತಿ ಸತ್ತ್ವಗುಣದಿಂದ ಸಂಕೋಚಗೊಂಡು ಸ್ವಾರ್ಥತೆ ಎನಿಸಿದೆ. ಅಮೃತಸ್ವರೂಪನೂ, ಮೃತ್ಯುಂಜಯನೂ ಆದ ಪರಮಾತ್ಮನ ಬಂಧುವೆನಿಸಿದ ಜೀವನಲ್ಲಿಯೂ ಪರಮಾತ್ಮ ನಂತೆಯೇ ವಿಶಾಲವಾದ ಇಚ್ಛಾಶಕ್ತಿಯೇ ಇರಬೇಕಾಗಿತ್ತು. ಆದರೆ ಅವನನ್ನು ತನ್ನ ಬುದ್ಧಿಶಕ್ತಿಯ ಒಂದಂಶವಾದ ಸತ್ತ್ವ ಗುಣವು ಪೂರ್ಣವಾಗಿ ಆವರಿಸಿರುವುದರಿಂದ ಅವನ ಇಚ್ಛಾ ಶಕ್ತಿಯು ಕೇವಲ ಸ್ವಾರ್ಥಸಾಧನೆಯಲ್ಲಿಯೇ ತೊಡಗಿದೆ. ಹೀಗೆ ಜೀವಾತ್ಮನ ಸತ್ಯಸ್ವರೂಪವನ್ನು ಸತ್ತ್ವಗುಣವು ಮುಚ್ಚಿ ರುವುದರಿಂದ ಅವನ ಇಚ್ಛೆಯು ವಿಶಾಲವೂ ವ್ಯಾಪಕವೂ ಆಗು ವಂತಿಲ್ಲ. ತಾನು ಸತ್ಯನೆಂಬುದನ್ನೇ ಅವನು ಮರೆಯುತ್ತಿರುವುದ

ರಿಂದ ಅವನ ಬಯಕೆ ಉದಾತ್ತವೂ ಉನ್ನತವೂ ಆಗಲಿಕ್ಕೆ ಅವಕಾಶವಿಲ್ಲ. ಯಾವನು ತನ್ನನ್ನು ಶಾಶ್ವತವಾಗಿರುವವನೆಂದು ಭಾವಿಸುವನೋ ಅವನೇ ವಿಶಾಲದೃಷ್ಟಿಯಿಂದ ಸರ್ವರ ಹಿತವನ್ನು ಬಯಸಬಲ್ಲನು. ಹೀಗೆ ಅವನ ಇಚ್ಛಾಶಕ್ತಿಯು ಸಂಕೋಚ ಗೊಂಡು ತನ್ನ ವೈಶಾಲ್ಯವನ್ನೂ, ಉದಾತ್ತತೆಯನ್ನೂ ಕಳೆದು ಕೊಂಡಿರುವುದರಿಂದ ಅವನು ಪರಮಾತ್ಮನಿಂದ ಸಹಜವಾಗಿ ಭಿನ್ನನಾಗಿರುವನು.

ಜೀವಾತ್ಮನ ಸತ್ಯಸ್ವರೂಪವನ್ನು ಸತ್ತ್ವಗುಣವು ಬಂಧಿಸಿರು ವುದರಿಂದ ಅವನ ಇಚ್ಛಾಶಕ್ತಿಯು ಸಂಕುಚಿತವಾಗಿ ಸ್ವಾರ್ಥತೆ ಎನಿಸಿರುವುದು. ಅವನ ಜ್ಞಾನಸ್ವರೂಪವನ್ನು ರಜೋಗುಣವು ಬಂಧಿಸಿರುವುದರಿಂದ ಅವನ ಜ್ಞಾನಶಕ್ತಿಯೂ ತನ್ನ ವೈಶಾಲ್ಯ ವನ್ನು ಕಳೆದುಕೊಂಡು ಸಂಕುಚಿತವಾಗಿದೆ. ಇಲ್ಲಿ ಗುಣವೆಂದರೆ ಹಗ್ಗ. ಮೈದಾನದಲ್ಲಿ ಹುಲ್ಲನ್ನು ತಿಂದು ಮನೆಗೆ ಬಂದ ಪಶುವನ್ನು ಯಜಮಾನನು ಕುತ್ತಿಗೆಗೆ ಹಗ್ಗವನ್ನು ಬಿಗಿದು ಗೊಂತಿಗೆ ಕಟ್ಟಿ ದಂತೆ ಬುದ್ಧಿಶಕ್ತಿಯು ಜೀವಾತ್ಮನನ್ನು ಸತ್ತ್ವರಜಸ್ತಮೋಗುಣ ಗಳಿಂದ ಕೊರಳಲ್ಲೂ, ಸೊಂಟದಲ್ಲೂ ಪಾದಗಳಲ್ಲೂ ಬಂಧಿಸಿ ದೇಹವೆಂಬ ಗೊಂತಿಗೆ ಕಟ್ಟಿಹಾಕಿದೆ. ಕೊರಳಿನ ಪಾಶವೇ ಸತ್ತ್ವಗುಣ. ಇದು ಜೀವನ ಸತ್ಯಸ್ವರೂಪವನ್ನು ಮುಚ್ಚಿದೆ. ಇದರಿಂದ ಅವನು ತನ್ನನ್ನು ಅಮೃತನೆಂದು ಭಾವಿಸದೆ ಜನನ ಮರಣಗಳ ಭಯದಿಂದ ನರಳುತ್ತಿರುವನು. ತಾನು ಸತ್ಯ, ಅಮೃತ ಎಂಬುದನ್ನೇ ಅವನು ಸತ್ತ್ವಗುಣದ ಪ್ರಭಾವದಿಂದ ಮರೆತು ತನ್ನನ್ನು ಸಾಯುವವನೆಂದೂ ಮತ್ತೆ ಹುಟ್ಟುವವನೆಂದೂ ತಿಳಿದಿರುವನು. ಇದರಿಂದಲೇ ಅವನು ದೇಹದ ರೋಗರುಜಿನ ಗಳನ್ನು ತನ್ನವೆಂದು ತಪ್ಪಾಗಿ ಭಾವಿಸಿ ಅದಕ್ಕಾಗಿ ಗೋಳಾಡು

ತ್ತಿರುವನು. ಎಲ್ಲರೊಳಗೂ ತಾನೇ ಇರುವೆನೆಂಬ ಸದ್ಭಾವನೆಯು ತೊಲಗಿ ಈ ಒಂದು ದೇಹದಲ್ಲಿ ಮಾತ್ರವೇ ತಾನಿರುವೆನೆಂಬ ಅಲ್ಪತನವು ಅವನನ್ನು ಆವರಿಸಿದೆ. ವಿಭುವೆನಿಸಿದ ಜೀವಾತ್ಮನು ಸತ್ತ್ವಗುಣದ ಆವರಣದಿಂದ ತನ್ನ ವೈಶಾಲ್ಯವನ್ನು ಕಳೆದು ಕೊಂಡು ಬಂದು ದೇಹದಲ್ಲಿ ಮಾತ್ರವೇ ಇರುವುದರಿಂದ ತನ್ನನ್ನು "ಅಣು"ವೆಂದು ತಪ್ಪಾಗಿ ಭಾವಿಸಿರುವನು. ಹೀಗೆ ಅವನಲ್ಲಿ ಆಣವವೆಂಬ ದೋಷವು ವ್ಯಾಪಿಸಿದೆ. ಇದರ ದುಷ್ಪ್ರಭಾವದಿಂದ ಅವನು ತನ್ನನ್ನು ಬೇರೆಯವರಿಂದ ದೂರನೆಂದು ಭಾವಿಸುತ್ತಿರು ವನು. ತನಗೂ ಇತರ ಜೀವರಿಗೂ ಯಾವ ಸಂಬಂಧವೂ ಇಲ್ಲ ವೆಂಬ ಪರಸ್ಪರಭೇದದೃಷ್ಟಿ ಜೀವನಲ್ಲಿ ಹೀಗೆ ಬೆಳೆದುಬಂದಿದೆ. ಅವನು ತನ್ನ ಸತ್ಯಸ್ವರೂಪವನ್ನು ಮರೆತದ್ದರಿಂದ ಅವನಲ್ಲಿ ಸಂಭವಿಸಿದ ಶಕ್ತಿಸಂಕೋಚವೆಂದರೆ ಇದೇ ಮೊದಲನೆಯದು. ಇವನು ತನ್ನನ್ನು ದೇಹದೃಷ್ಟಿಯಿಂದ ನೋಡತೊಡಗಿದ್ದರಿಂದ ಇವನಲ್ಲಿ ಅಣುತ್ವಬುದ್ಧಿಯೂ, ಭೇದಭಾವನೆಯೂ ಅಂಟಿ ಕೊಂಡವು. ಇದರಿಂದ ಇವನಲ್ಲಿ ಸಾರ್ವಜನಿಕಹಿತದ ಬಯಕೆಯು ತೊಲಗಿ ಸ್ವಾರ್ಥಸಂಪಾದನೆಯ ಬಯಕೆ ಹೆಚ್ಚಿತು. ಇವೆಲ್ಲವೂ ಆಣವಮಲದ ದುಷ್ಪರಿಣಾಮ. ಬುದ್ಧಿಶಕ್ತಿಯ ಸ್ವರೂಪವೆನಿಸಿದ ಮೂರು ಗುಣಗಳಲ್ಲೊಂದಾದ ಸತ್ತ್ವಗುಣವೇ ಜೀವನ ಸತ್ಯ ಸ್ವರೂಪವನ್ನು ಹೀಗೆ ಹದಗೆಡಿಸಿ ಅವನ ವರ್ತನೆಯನ್ನು ಬದ ಲಾಯಿಸಿದೆ. ಇದರಿಂದ ಅವನು ಯಾವಾಗಲೂ ತನ್ನನ್ನು ಮತ್ತು ಹೊಟ್ಟೆಯನ್ನು ಗಮನಿಸುತ್ತಿರುವನು. ಸಾಮಾನ್ಯಜನರು ಹೀಗೆ ಆಣವಮಲದ ಆವರಣದೊಳಗೆ ಸಿಲುಕಿಕೊಂಡು ತಮ್ಮ ಸತ್ಯ ಸ್ವರೂಪವನ್ನು ಮರೆತು ಮರಣಭಯದಿಂದ ನಡುಗುತ್ತ ಗೋಳಾ ಡುತ್ತಿರುವರು. ಈ ರೀತಿಯಲ್ಲಿ ಆಣವಮಲದಿಂದ ಜೀವರಲ್ಲಿ

ಭೇದಬುದ್ಧಿಯೂ, ಸ್ವಾರ್ಥಭಾವನೆಯೂ ಸಹಜವಾಗಿ ಅಂಟಿಕೊಂಡವು. ಇದು ಒಂದು ಬಗೆಯ ಸಂಕೋಚವಾದರೆ ಅವನಲ್ಲಿ ಮತ್ತೆ ಎರಡು ಬಗೆಯ ಸಂಕೋಚಗಳೂ ವ್ಯಾಪಿಸಿ ಕಾಡಿಸುತ್ತಲಿವೆ.

ಸತ್ತ್ವಗುಣವು ಜೀವನ ಸತ್ಯಸ್ವರೂಪವನ್ನು ಮುಚ್ಚಿರುವಂತೆ ಬೇರೆ ಎರಡು ಗುಣಗಳು ಅವನ ಜ್ಞಾನಸ್ವರೂಪವನ್ನೂ, ಆನಂದ ಸ್ವರೂಪವನ್ನೂ ಮುಚ್ಚಿವೆ. ಇವೇ ರಜಸ್ತಮೋಗುಣಗಳು. ರಜೋಗುಣವು ಜೀವನ ಜ್ಞಾನಸ್ವರೂಪವನ್ನೂ, ತಮೋಗುಣವು ಆನಂದಸ್ವರೂಪವನ್ನೂ ಮುಚ್ಚಿವೆ. ರಜೋಗುಣವೆಂದರೆ ಅಭಿಮಾನ ಮತ್ತು ವ್ಯಾಮೋಹ. ಇವೆರಡೂ ಸೇರಿ ಜೀವಾತ್ಮನ ವಿಶಾಲವಾದ ಜ್ಞಾನಶಕ್ತಿಯನ್ನು ಮುಚ್ಚಿವೆ. ಜೀವನ ಜ್ಞಾನ ಶಕ್ತಿ ಪರಮಾತ್ಮನ ಜ್ಞಾನಶಕ್ತಿಯಂತೆಯೇ ವಿಶ್ವದ ಹಿತವನ್ನು ವಿವೇಚನೆಮಾಡಬೇಕಾಗಿತ್ತು. ಜೀವನು ಜ್ಞಾನಸ್ವರೂಪನೇ ಆಗಿ ಅವನಲ್ಲಿ ಜ್ಞಾನವು ಗುಣವೂ ಆಗಿರುವುದರಿಂದ ಎಲ್ಲವನ್ನು ತಿಳಿಯುವ ಶಕ್ತಿ ಅವನಲ್ಲಿ ಸಹಜವಾಗಿದೆ. ಆದರೆ ಆ ತಿಳಿವು ರಜೋಗುಣದ ಆವರಣದಿಂದ ತನ್ನ ವೈಶಾಲ್ಯವನ್ನು ಕಳೆದುಕೊಂಡಿದೆ. ವಿಶ್ವದ ಮಾನವರೆಲ್ಲರೂ ತನ್ನ ಆತ್ಮೀಯಬಂಧುಗಳೆಂದು ತಿಳಿಯುವುದು ಜೀವನ ಸ್ವಭಾವವೇ ಆದರೂ ಅವನು ರಜೋಗುಣದ ಪ್ರಭಾವಕ್ಕೆ ಸಿಲುಕಿ ಕೆಲವರನ್ನು ಮೋಹಿಸುತ್ತಲೂ, ಕೆಲವರನ್ನು ದ್ವೇಷಿಸುತ್ತಲೂ ಇರುವನು. ಜೀವನು ಸಹಜವಾಗಿ ಶುದ್ಧನೂ, ನಿರ್ಮಲನೂ ಆಗಿದ್ದರೂ ಅವನ ಜ್ಞಾನಶಕ್ತಿಯ ವ್ಯಾಪ್ತಿಯನ್ನು ರಜೋಗುಣವು ಮೊಟಕುಮಾಡಿದೆ. ಇದರಿಂದ ಅವನು ಎಲ್ಲರನ್ನೂ ಆತ್ಮೀಯರೆಂದು ತಿಳಿಯದೆ ತನ್ನ ರಕ್ತ ಸಂಬಂಧಿಗಳನ್ನು ಮಾತ್ರವೇ ತನ್ನವರೆಂದು ಭಾವಿಸುವಷ್ಟು

ಕೆಳಮಟ್ಟಕ್ಕೆ ಇಳಿದಿರುವನು. ಸತ್ತ್ವಗುಣದಿಂದ ಇಚ್ಛಾಶಕ್ತಿಯು ಸಂಕೋಚಗೊಂಡು ಸ್ವಾರ್ಥತೆಯಲ್ಲಿ ಪರಿಣಮಿಸಿದಂತೆ ರಜೋಗುಣದಿಂದ ಜ್ಞಾನಶಕ್ತಿಯು ಸಂಕೋಚಗೊಂಡು ಮಾಯೆಯ ಮಲಿನಿಸಿ ಅಭಿಮಾನವ್ಯಾಮೋಹಗಳನ್ನು ಹುಟ್ಟಿಸಿತು. ಇದರ ಪ್ರಭಾವದಿಂದ ಅವನು ತನಗೆ ಅನುಕೂಲರಾದವರನ್ನು ಮಾತ್ರವೇ ಮೋಹಿಸುತ್ತ ಬೇರೆಯವರನ್ನು ದ್ವೇಷಿಸಲಾರಂಭಿಸಿದನು. ರಾಗ ದ್ವೇಷಗಳು ಅವನಲ್ಲಿ ಬೆಳೆದದ್ದು ಈ ರಜೋಗುಣದ ಪ್ರಭಾವ ದಿಂದ. ಜ್ಞಾನಶಕ್ತಿಯ ವ್ಯಾಪ್ತಿಯು ಸಂಕೋಚಗೊಂಡದ್ದೂ ಇದರ ದುಷ್ಪರಿಣಾಮವೇ. ಇವನು ನಮ್ಮವನು, ಇವನು ಅನ್ಯನು ಎಂಬ ಸಣ್ಣತನವು ಅವನಲ್ಲಿ ಬೆಳೆದದ್ದೂ ಈ ರಜೋಗುಣ ದಿಂದಲೇ. ವಿಶ್ವವೇ ತಾನೆಂಬ ಉದಾರಭಾವನೆಯನ್ನು ಇವನು ಕಳೆದುಕೊಂಡದ್ದೂ ಇದರಿಂದಲೇ. ವಿಶ್ವಪ್ರೇಮಿ, ವಿಶ್ವಕುಟುಂಬಿ ಎಂಬ ಭಾವನೆಯನ್ನು ಅವನು ಕಳೆದುಕೊಂಡದ್ದೂ ಇದರಿಂದಲೇ. ಹೀಗೆ ಕ್ಷುದ್ರಭಾವನೆಯಿಂದಲೂ, ಸ್ವೇಚ್ಛಾನುಸಂಧಾನದಿಂದಲೂ ಜೀವನು ನರಳುತ್ತ ಮೃತಪ್ರಾಯನಾಗಿರುವನು. ಅಮೃತಸ್ಥಿತಿ ಯಲ್ಲಿದ್ದವನಿಗೆ ಹೀಗೆ ಮರಣಭಯದಿಂದ ನಡುಗುವ ದುಸ್ಥಿತಿ ಯುಂಟಾಯಿತು. ಸರ್ವಜ್ಞನೆನಿಸಿದ ಶುದ್ಧಜೀವನಿಗೆ ಸಂಕುಚಿತ ಭಾವನೆಯಿಂದ ಕರಗಿ ಕೊರಗಿ ಬೆಂಡಾಗಿ ನರಳುವ ದುಸ್ಥಿತಿ ಯುಂಟಾಯಿತು.

ಹೀಗೆ ನರಳುತ್ತಿದ್ದರೂ ಜೀವನಲ್ಲಿ ವಿಧೇಯತೆ, ಕೃತಜ್ಞತೆ, ಸಮ್ಮತಿ ಮೊದಲಾದ ಸದ್ಗುಣಗಳ ಸುಳಿವೇ ಇಲ್ಲದಂತೆಯೂ ಆಗಿದೆ. ಅವನ ಆನಂದಸ್ವರೂಪವನ್ನು ತಮೋಗುಣವು ಮುಚ್ಚಿ ರುವುದರಿಂದ ಅವನಲ್ಲಿ ಅವಿಧೇಯತೆ, ದುರಹಂಕಾರವರ್ತನೆ, ದುರಭಿಮಾನ ಮೊದಲಾದ ದುರ್ಗುಣಗಳು ಮನೆಮಾಡಿ

ಕೊಂಡಿವೆ. ತಮೋಗುಣದ ಆವರಣದಿಂದ ಅವನಲ್ಲಿದ್ದ ಕ್ರಿಯಾ ಶಕ್ತಿಯು ಸಂಕೋಚಗೊಂಡಿದೆ. ಕ್ರಿಯಾಶಕ್ತಿಯು ಆನಂದ ಸ್ವರೂಪದ ಉತ್ತೇಜಕಸಾಮಗ್ರಿ. ಯಾವನು ಆನಂದಮಯ ನಾಗಿರುವನೋ ಅವನಿಂದಲೇ ಅದ್ಭುತವಾದ ಕ್ರಿಯೆ ನಡೆಯು ಲಿರುವುದು. ಯಾವನು ದುಃಖದಿಂದ ನರಳುತ್ತಿರುವನೋ ಅವ ನಿಂದ ಯಾವ ಕ್ರಿಯೆಯೂ ನಡೆಯುವಂತಿಲ್ಲ. ಸುಖವಾಗಿ ಬಾಳುವವನಿಂದಲೇ ಏನಾದರೊಂದು ಕ್ರಿಯೆಯು ನಡೆಯಲಿಕ್ಕೆ ಸಾಧ್ಯವಿದೆ. ಕ್ರಿಯೆಯಿಂದಲೇ ಸುಖಶಾಂತಿಸಮಾಧಾನಗಳು ನಮಗೆ ಲಭಿಸಬೇಕಾಗಿವೆ. ಆದ್ದರಿಂದಲೇ ಜೀವನವನ್ನು ಕ್ರಿಯಾ ಸಾರವೆಂದು ಜ್ಞಾನಿಗಳು ಕರೆದಿದ್ದಾರೆ. ಜೀವನದಲ್ಲಿ ಕ್ರಿಯೆಯೇ ಸಾರವಾದ ಭಾಗವೆನಿಸಿದೆ. ಕ್ರಿಯೆಯಿಲ್ಲದವನಿಗೆ ಇಹವೂ ಇಲ್ಲ; ಪರವೂ ಇಲ್ಲ. ಕ್ರಿಯಾವಂತನೇ ಸದ್ಗುಣಗಳಿಗಾಕರನಾಗಿರು ವನು. ಸದ್ಗುಣಗಳೆಲ್ಲಕ್ಕೂ ಕೃತಜ್ಞತೆಯೇ ಮೂಲ. ಇದಿಲ್ಲ ದವನು ಆನಂದವನ್ನು ಅನುಭವಿಸಲಾರನು. ಇಂತಹ ಆನಂದ ವನ್ನು ತಮೋಗುಣವು ಮುಚ್ಚಿರುವುದರಿಂದ ಜೀವನಲ್ಲಿ ಕ್ರಿಯಾ ಶಕ್ತಿ ಹೇಗೆ ನೆಲಸೀತು? ಇದರ ಬದಲು ಅವನಲ್ಲಿ ಅಹಂಕಾರದ ದುಷ್ಪ್ರವೃತ್ತಿ ಬೆಳೆದುಬಂದಿದೆ. ಕೈಲಾಗದ ಹೇಡಿ ಆಲಸ್ಯದಿಂದ ಹಾಸಿಗೆಯಲ್ಲಿ ಮಲಗಿ ಬಾಯಿಗೆ ಬಂದಂತೆ ಬಗಳುವನು. ಇದೆ ಲ್ಲವೂ ತಮೋಗುಣದ ಕೆಲಸ. ಜೀವನು ಚೇತನನೆನಿಸಿ ಯಾವಾ ಗಲೂ ಜಾಗರೂಕತೆಯಿಂದ ಇರುವವನಾದರೂ ತಮೋಗುಣದ ದುಷ್ಪ್ರಭಾವದಿಂದ ಕ್ರಿಯಾಹೀನನಾಗಿ ದುರಹಂಕಾರದಿಂದ ಮೆರೆ ಯುವನು. ಹೀಗೆ ದುರಹಂಕಾರದಿಂದ ಕೂಡಿ ಜೀವನು ತನ್ನೊಬ್ಬ ನಿಂದಲೇ ಯಾವ ಕಾರ್ಯವೂ ಆಗದೇ ಇದ್ದರೂ ಎಲ್ಲವೂ ತನ್ನಿಂದಲೇ ಆಗುತ್ತದೆ ಎಂದು ಅಭಿನಿವೇಶದಿಂದಲೂ, ಆಗ್ರಹ

ದಿಂದಲೂ ಹೇಳಿಕೊಳ್ಳುವನು. ಕುಣಿಯಲಾಗದ ಸೂಳೆ ನೆಲ ಡೊಂಕು ಎಂಬಂತೆ, ಉಳಲಿಕ್ಕೆ ಕೈಲಾಗದ ಎತ್ತು ಮುಳಿಯ ಕಡೆಗೆ ಸುಗ್ಗುವಂತೆ, ತಮೋಗುಣದ ಆಸುರೀಶಕ್ತಿಗೆ ವಶನಾದ ಜೀವನು ಕ್ರಿಯಾಭ್ರಷ್ಟನಾಗಿ ತನ್ನ ಕರ್ತವ್ಯವನ್ನರಿಯದೆ ದುರಹಂಕಾರದಿಂದ ಮೆರೆಯುತೊಡಗುವನು.

ಜೀವಾತ್ಮನು ದೇಹೇಂದ್ರಿಯಗಳ ಸೌಕರ್ಯವನ್ನು ಹೊಂದಿದ್ದರೂ ಸತ್ತ್ವರಜಸ್ತಮೋಗುಣಗಳ ಹಿಡಿತಕ್ಕೆ ಸಿಲುಕಿ ಸ್ವಾರ್ಥಸಾಧಕನೂ, ಮೋಹಪರನೂ, ದುರಭಿಮಾನಿಯೂ ಆಗಿ ಯುಕ್ತಾಯುಕ್ತವಿವೇಕವಿಲ್ಲದ ಪಶುವಿನಂತೆ ವರ್ತಿಸುತ್ತಿರುವನು. ಆಣವಮಲದ ಪ್ರಭಾವದಿಂದ ಅವನು ಎಲ್ಲರ ಹಿತವನ್ನೂ ಬಯಸದೆ ಸ್ವಾರ್ಥಚಿಂತನೆಯಲ್ಲಿಯೇ ತೊಡಗುವನು. ಮಾಯೆಯ ಮಲದ ಪ್ರಭಾವದಿಂದ ಸರ್ವರನ್ನೂ ಆತ್ಮೀಯತೆಯಿಂದ ಪ್ರೀತಿಸುವ ವಿಶಾಲಮನೋಭಾವವನ್ನು ಕಳೆದುಕೊಂಡು ವ್ಯಾಮೋಹದೃಷ್ಟಿಯನ್ನು ಬೆಳೆಸಿಕೊಳ್ಳುವನು. ತಮೋಗುಣದ ಪ್ರಭಾವದಿಂದ ಜೀವನದ ಸಾರಸಂಜೀವಿನಿ ಎನಿಸಿದ ಕ್ರಿಯೆಯ ಮಹತ್ತ್ವವನ್ನು ಮರೆತು ಯಾವಾಗಲೂ ನಿದ್ರೆ, ಆಲಸ್ಯ, ಜಡಸ್ವಭಾವಗಳಿಂದ ಕೂಡಿ ಸಾರ್ವಜನಿಕಹಿತಸಾಧನೆಯನ್ನು ತೊರೆದು ತನ್ನಿಂದಲೇ ಎಲ್ಲವೂ ನಡೆಯುತ್ತದೆ ಎಂಬ ದುರಹಂಕಾರದ ದುಷ್ಪ್ರಚಾರದಲ್ಲಿ ತೊಡಗುವನು. ಕ್ರಿಯಾಶಕ್ತಿ ಇಲ್ಲದೆ ಉತ್ಸಾಹಹೀನನಾದ ಮಾನವನು ಮುಡಿಯಿಲ್ಲದ ವಿಧವೆಯ ಶೃಂಗಾರದಂತೆ ಕಾಂತಿಹೀನನಾಗುವನು. ವಿವೇಚನೆಯಿಲ್ಲದವನು ಆಡುವ ಮಾತು ಹುಚ್ಚನ ಮಾತಿನಂತೆ ವ್ಯರ್ಥವೂ ಅನರ್ಥವೂ ಆಗುತ್ತದೆ. ಮಾನವನು ಕ್ರಿಯೆಯಿಂದ ಶೋಭಿಸಬೇಕೇ ಹೊರತು ಬರಿಯ ವ್ಯರ್ಥಾಲಾಪಗಳಿಂದ ಎಂದಿಗೂ ಶೋಭಿಸಲಾರನು.

ಸಚ್ಚಿದಾನಂದಸ್ವರೂಪನಾದ ಶುದ್ಧಜೀವನು ತ್ರಿಗುಣಗಳೆಂಬ ಪಾಶಗಳಿಂದ ಬದ್ಧನಾಗಿ ಸ್ವರೂಪವನ್ನು ಮರೆತು ದೇಹವೇ ತಾನೆಂದೂ, ತನ್ನದೆಂದೂ, ಭ್ರಮಿಸಿ ಮತಿಹೀನನಾಗಿ ಕಂಗೆಟ್ಟು ನರಳುತ್ತಿರುವನು.

"ಆತ್ಮಾಯಂ ಕೇವಲಃ ಶುದ್ಧಃ" ಎಂದು ಮಗ್ಗೆ ಮಾಯಿ ದೇವನು ಅನುಭವಸೂತ್ರದಲ್ಲಿ ಜೀವಾತ್ಮನನ್ನು ಶುದ್ಧನೆಂದೂ, ದೇಹದಲ್ಲಿದ್ದರೂ ದೇಹಕ್ಕೆ ಅಂಟಿಕೊಳ್ಳದೆ ಕೇವಲನೆನಿಸಿರುವ ನೆಂದೂ ತಿಳಿಸಿದ್ದಾನೆ. ಆದರೆ ಲೋಕದಲ್ಲಿ ವ್ಯವಹರಿಸುವ ಮಾನವರನ್ನು ನೋಡಿದರೆ ಇಂತಹ ಶುದ್ಧ ಕೇವಲಸ್ವಭಾವವೇ ಅನೇಕರಲ್ಲಿ ಕಂಡುಬರುತ್ತಿಲ್ಲ. ಕೆಲವರು ಸತ್ತ್ವಗುಣಕ್ಕೂ, ಕೆಲ ವರು ರಜೋಗುಣಕ್ಕೂ, ಕೆಲವರು ತಮೋಗುಣಕ್ಕೂ, ಕೆಲವರು ರಜಸ್ತಮೋಗುಣಗಳಿಗೂ, ಕೆಲವರು ಸತ್ತ್ವರಜೋಗುಣ ಗಳಿಗೂ ಬದ್ಧರಾಗಿ ಎಲ್ಲರೂ ಸ್ವಾರ್ಥತೆ, ವ್ಯಾಮೋಹ, ಅಹಂ ಕಾರಗಳಿಂದ ಮೆರೆಯುತ್ತಲಿರುವರು. ಇದಕ್ಕೆ ಕಾರಣವೇನು? ಜೀವಾತ್ಮನ ಅದ್ಭುತವಾದ ಚೈತನ್ಯಶಕ್ತಿಯನ್ನೇ ಈ ಗುಣಗಳು ಹೀಗೆ ಆವರಿಸಿ ಬಂಧಿಸಿದಮೇಲೆ ಅವನ ಚೈತನ್ಯಶಕ್ತಿಗಿಂತಲೂ ಅವನ ತ್ರಿಗುಣಗಳ ಶಕ್ತಿಯೇ ಪ್ರಬಲವೆನಿಸುವುದಿಲ್ಲವೆ? "ಜೀವಾತ್ಮ ಶಕ್ತಿಂ ಸ್ವಗುಣೈರ್ನಿಗೂಢಾಂ" ಎಂದು ಶ್ವೇತಾಶ್ವತರೋಪನಿಷತ್ತು ಜೀವನ ಆತ್ಮಶಕ್ತಿಯು ಅವನ ಗುಣಗಳಿಂದಲೇ ಆವೃತವಾಗಿದೆ ಎಂದು ಸ್ಪಷ್ಟವಾಗಿ ತಿಳಿಸುತ್ತದೆ. ಗುಣಗಳ ಪ್ರಭಾವವೇ ಹೀಗೆ ಜಗತ್ತಿನಲ್ಲೆಲ್ಲಾ ವ್ಯಾಪಿಸಿ ಆತ್ಮಶಕ್ತಿಯನ್ನು ತೇಜೋಹೀನ ವನ್ನಾಗಿ ಮಾಡಿದೆ. ಇಷ್ಟೊಂದು ಅನಾಹುತವು ಏಕೆ ಆಯಿತು? ಪರಮಾತ್ಮನ ಚೇತನಶಕ್ತಿಯ ಅಂಶನಾದ ಜೀವನನ್ನು ಅದೇ ಪರಮಾತ್ಮನ ಜಡಶಕ್ತಿಯು ಹೀಗೆ ನಿರ್ವೀರ್ಯನನ್ನಾಗಿ

ಮಾಡಿದ್ದರಿಂದ ಪರಮಾತ್ಮನಿಗೆ ಆಗುವ ಫಲವಾದರೂ ಏನು? ಚೈತನ್ಯವೇ ಜಡಶಕ್ತಿಯ ಮುಂದೆ ಕಾಂತಿಹೀನವಾಗುವುದಾದರೆ ಚೈತನ್ಯದ ವಿಕಾಸವಾದರೂ ಆಗುವ ಬಗೆ ಹೇಗೆ? ಈ ಸಮಸ್ಯೆಯನ್ನು ಭಗವದ್ಗೀತೆಯು ಬಹು ಸೊಗಸಾಗಿ ಬಿಡಿಸುತ್ತದೆ. ಜೀವಾತ್ಮನು ಭಗವದಂಶನೇ ಆದರೂ ಅಂತಃಕರಣವೆಂಬ ಮನೆಯಲ್ಲಿ ವಾಸಮಾಡುತ್ತಿರುವನು. ಅವನು ಪ್ರೇಮಸ್ವರೂಪನೇ ಆದರೂ ಅವನಿರುವ ಮನೆ ದ್ವೇಷಪೂರ್ಣವಾದುದು. ಆದರ ಪ್ರಭಾವದಿಂದ ಅವನಿಗೆ ಪ್ರೇಮದೃಷ್ಟಿಯು ತೊಲಗಿ ದ್ವೇಷಭಾವನೆಯು ಹುಟ್ಟಿರುವುದು ಸಹಜ. ಅಂತಃಕರಣಧರ್ಮವನ್ನು ಜೀವನು ತನ್ನಲ್ಲಿ ಅಂಟಿಸಿಕೊಂಡು ಸ್ವಾರ್ಥತೆ, ವ್ಯಾಮೋಹ, ಅಹಂಕಾರಗಳಿಂದ ಮೆರೆಯುವುದು ಸ್ವಾಭಾವಿಕ. ಪ್ರಕೃತಿಯೊಳಗೆ ಸಿಲುಕಿದ ಜೀವನಿಗೆ ಸ್ವಭಾವದ ಬದಲಾವಣೆ ಸಹಜ. ಪ್ರತಿಯೊಬ್ಬನೂ ತನ್ನ ವಾಸದ ಮನೆಯಲ್ಲಿ ಕೊಂಚವಾದರೂ ಅಭಿಮಾನಿಸುವುದು ಸ್ವಾಭಾವಿಕ. ಅದರಂತೆ ಜೀವನು ತನ್ನ ಸತ್ಯಸ್ವರೂಪದ ಬದಲು ತನ್ನನ್ನು ಸಾತ್ವಿಕನೆಂದೂ, ತನ್ನ ಜ್ಞಾನಸ್ವರೂಪದ ಬದಲು ತನ್ನನ್ನು ರಾಜಸನೆಂದೂ, ಆನಂದಸ್ವರೂಪದ ಬದಲು ತನ್ನನ್ನು ತಾಮಸನೆಂದೂ ಸಹಜವಾಗಿ ಭಾವಿಸಿ ಹಾಗೆಯೇ ವ್ಯವಹರಿಸುತ್ತಿರುವನು. ಇದೆಲ್ಲವೂ ಅಂತಃಕರಣದ ದುಷ್ಪ್ರಭಾವ. ಆದ್ದರಿಂದಲೇ ಭಗವದ್ಗೀತೆಯು ಮಾಯೆಯ ಪ್ರಾಬಲ್ಯವನ್ನು ಒತ್ತಿ ಹೇಳಿದೆ. "ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ" ಹೀಗೆ ಗೀತೆ ಪರಮಾತ್ಮನಿಗೆ ಸಂಬಂಧಿಸಿದ ತ್ರಿಗುಣಾತ್ಮಕವಾದ ಮಾಯಾಶಕ್ತಿಯನ್ನು ಯಾವನೂ ಜಯಿಸಲಿಕ್ಕಾಗುವುದಿಲ್ಲವೆಂದು ಸ್ಪಷ್ಟವಾಗಿ ತಿಳಿಸಿದೆ. ಪರಮಾತ್ಮನು ತನ್ನ ಮಾಯಾಶಕ್ತಿಗೆ ಈ ಮೂರು ಪಾಶಗಳನ್ನು ಕೊಟ್ಟು ಅವು

ಗಳ ಮೂಲಕ ಜೀವರನ್ನು ದಂಡಿಸುತ್ತಿರುವನು. ಜೀವರು ಒಮ್ಮೆ ತಮ್ಮ ಮೂಲಸ್ವರೂಪವನ್ನು ಮರೆತು ಅಹಂಕಾರದಿಂದ ಮೆರೆದದ್ದರಿಂದ ಅವರಮೇಲೆ ಗುಣಗಳ ಪ್ರಭಾವವು ಹೆಚ್ಚುತ್ತ ಬಂತು.

ಜೀವರು ತಮ್ಮೊಳಗೇ ಇರುವ ಪರಮಾತ್ಮನನ್ನೂ, ತಮ್ಮನ್ನೂ ಮರೆತು ಮಾಯೆಯ ಆಕರ್ಷಣಗಳಿಗೆ ವಶರಾದ್ದರಿಂದ ದೇಹದಲ್ಲಿ ಇಂದ್ರಿಯಗಳಿಗೆ ದಾಸರಾಗಿದ್ದಾರೆ; ಎಲ್ಲಾ ಇಂದ್ರಿಯಗಳಲ್ಲೂ ಪರಮಾತ್ಮನೇ ಜೀವರ ಉದ್ಧಾರಕ್ಕಾಗಿ ನೆಲಸಿ ಅವರ ಯೋಗಕ್ಷೇಮಗಳನ್ನು ನೋಡಿಕೊಳ್ಳುತ್ತಲಿದ್ದರೂ ಅವರು ಇದನ್ನು ಮರೆತು ಇಂದ್ರಿಯಗಳಿಗೆ ದಾಸರಾಗಿ ಅವು ತಮಗೆ ತಂದೊಡ್ಡುವ ಸುಖದುಃಖಗಳನ್ನು, ಸಿಹಿಕಹಿಗಳನ್ನು, ರಸಕಸಗಳನ್ನು ಅನುಭವಿಸುತ್ತ ಒಮ್ಮೆ ಸಂತೋಷಪಡುತ್ತಲೂ, ಒಮ್ಮೆ ದುಃಖಿಸುತ್ತಲೂ ಜನನಮರಣಗಳ ಚಕ್ರದಲ್ಲಿ ಸುತ್ತುತ್ತಲಿರುವರು. ಇಂದ್ರಿಯಗಳಿಗೆ ಅಧಿಪತಿಯಾಗಿ ಗೌರವದಿಂದ ಬಾಳಬೇಕಾಗಿರುವ ಜೀವನು ಅವೈದಕ್ಕೂ ದಾಸನಾಗಿ ಲಘುಜೀವನವನ್ನು ನಡೆಸುತ್ತಲಿರುವುದು ತುಂಬ ಶೋಚನೀಯ. ಒಬ್ಬ ಯಜಮಾನನಿಗೆ ಐವರು ಆಳುಗಳಿದ್ದರೆ ಅವನು ಎಲ್ಲರನ್ನು ವ್ಯವಸ್ಥೆಯಿಂದ ನಿಯಮನ ಮಾಡುತ್ತ ಎಲ್ಲರಿಂದಲೂ ಯುಕ್ತವಾಗಿ ದುಡಿಸಬಲ್ಲನು. ಆದರೆ ಒಬ್ಬನು ಐವರು ಯಜಮಾನರಿಗೆ ಆಳಾದರೆ ಅವನ ಪಾಡು ಎಷ್ಟು ಶೋಚನೀಯವಾಗುವುದೆಂಬುದನ್ನು ಹೇಳಬೇಕಾಗಿಯೇ ಇಲ್ಲ. ಒಬ್ಬನು ಐವರನ್ನು ಸಮಾಧಾನಮಾಡಲಿಕ್ಕೆ ಎಂದಿಗೂ ಆಗುವುದಿಲ್ಲ. ಒಬ್ಬ ಯಜಮಾನನು ಆ ಆಳನ್ನು ಒಂದು ಕೆಲಸಕ್ಕೆ ನೇಮಿಸಿದರೆ ಮತ್ತೊಬ್ಬನು ಅದೇ ಆಳನ್ನು ಆ ಕೂಡಲೆ ಬೇರೊಂದು ಕೆಲಸಕ್ಕೆ ನೇಮಿಸುವನು. ಆಳು ಅದನ್ನು ಮಾಡುತ್ತಿರುವಾಗಲೇ ಬೇರೊಬ್ಬ ಯಜಮಾನನು ಅವನನ್ನು

ಮತ್ತೊಂದು ಕೆಲಸಕ್ಕೆ ನೇಮಿಸುವನು. ಹೀಗೆ ಒಬ್ಬನನ್ನು ಐವರು ಏಕಕಾಲದಲ್ಲಿ ಐದು ಕಾರ್ಯಗಳಿಗೆ ವಿನಿಯೋಗಿಸುವುದರಿಂದ ಆಳಿನ ಬುದ್ಧಿಯು ಅಸ್ತವ್ಯಸ್ತವಾಗುವುದು ಸಹಜ. ಹಾಗೆ ಜೀವಾತ್ಮನು ದೇಹದಲ್ಲಿ ಇಂದ್ರಿಯಗಳಿಗಧಿಪತಿಯಾಗಿರುವ ಬದಲು ಅವಕ್ಕೆ ದಾಸನಾದರೆ ಅವನ ದುರ್ಗತಿಯನ್ನು ಎಷ್ಟು ಹೇಳಿದರೂ ಅಲ್ಪವೇ. ಲೋಕದಲ್ಲಿ ದಾಸನು ಯಜಮಾನನಾದರೆ ಸುಖ ಪಡಬಹುದು. ಆದರೆ ಯಜಮಾನನು ದಾಸನಾದರೆ ಅವನಿಗೆ ಸತ್ತಷ್ಟು ಸಾವು ಸಂಭವಿಸುವುದು. ಜೀವನು ತನ್ನ ಸ್ವರೂಪವನ್ನು ಮರೆತದ್ದರಿಂದ ಶಕ್ತಿಹೀನನೂ, ದರಿದ್ರನೂ ಆಗಿ ಇಂದ್ರಿಯಗಳಿಗೆ ದಾಸ್ಯವೃತ್ತಿಯನ್ನಾಚರಿಸುತ್ತಿರವನು. ಇದಕ್ಕಿಂತ ಬೇರೆ ದೈನ್ಯ ವೃತ್ತಿಯೇ ಜಗತ್ತಿನಲ್ಲಿ ಎಲ್ಲಿಯೂ ಕಾಣಲಾರದು. ಅವನು ತನ್ನ ಶಕ್ತಿಯ ವ್ಯಾಪ್ತಿಪ್ರಕಾಶಗಳನ್ನು ಕಳೆದುಕೊಂಡು ತನ್ನೊಳಗಿನ ಪರಮಾತ್ಮನ ಸಂಪರ್ಕವನ್ನು ಬಿಟ್ಟು ಸ್ವತಂತ್ರನಾಗಿ ಮೆರೆಯುತ್ತಿರುವುದರಿಂದ ಅವನಿಗೆ ಒದಗಿರುವ ಈ ದುರ್ಗತಿಯು ಸ್ವಯಂ ಕೃತಾಪರಾಧವೆನಿಸಿದೆ.

ಜೀವನು ತ್ರಿಗುಣಾತ್ಮಕವಾದ ಅಂತಃಕರಣದಲ್ಲಿ ನೆಲಸಿರುವುದರಿಂದಲೇ ಇಂದ್ರಿಯಸುಖಗಳಿಂದ ವಿನೋದಿಸಲಾರನು. ಈ ಅಂತಃಕರಣವಾದರೋ ಹೊಲಸಿನಿಂದಲೇ ತುಂಬಿದೆ. ಅಲ್ಲಿದ್ದ ಜೀವನು ಭೇದಭಾವನೆಯಿಂದ ಎಲ್ಲರನ್ನೂ ದ್ವೇಷಿಸುತ್ತಿರುವಾಗ ತನ್ನ ಪ್ರೇಮಸ್ವರೂಪವನ್ನು ಅವನು ಹೇಗೆ ಬೆಳಸಿಕೊಂಡಾನು? ಒಬ್ಬನು ತನ್ನ ಸಂತೋಷಕ್ಕಾಗಿ ಮನೆಯನ್ನು ಬಿಳುಪು ಕೆಂಪು ಕಪ್ಪುಬಣ್ಣಗಳಿಂದ ಅಲಂಕರಿಸಿಕೊಳ್ಳುವನು. ಈ ಕೆಲಸವನ್ನು ಅವನು ಅಭಿಮಾನದಿಂದ ನಡೆಸುತ್ತಲಿರುವುದರಿಂದ ಅವನಿಗೆ ಆ ಮನೆಯ ಮೇಲೆ ಮಮತೆ ಬೆಳೆಯುವುದು ಸಹಜ. ಅವನು

ನಿಂತಾಗ, ಕುಂತಾಗ, ಸ್ನೇಹಿತರೊಡನೆ ವ್ಯವಹರಿಸುವಾಗ, ಮಲಗಿದ್ದಾಗ ಹೀಗೆ ಯಾವಾಗಲೂ ತನ್ನ ಮನೆಯ ಅಲಂಕಾರದ ವಿಚಾರವಾಗಿಯೇ ಮಾತನಾಡತೊಡಗುವನು. ಅವನು ಮಲಗಿದ್ದಾಗಲಂತೂ ಅದನ್ನೇ ಕನವರಿಸುತ್ತಿರುವನು. ಬೇರೆಯವರ ಮನೆಗೆ ಹೋಗಿ ಆಪ್ತೇಷ್ಟರೊಡನೆ ಮಾತನಾಡುವಾಗಲೂ ಅವನು ತನ್ನ ಮನೆಯ ಅಲಂಕಾರವನ್ನೇ ಕಾಣುತ್ತಿರುವನು. ಯಾರಿಗೆ ಯಾವುದರಲ್ಲಿ ಮಮತೆಯು ಬೆಳೆಯುವುದೋ ಅವರಿಗೆ ಅದೇ ಎಲ್ಲೆಲ್ಲಿಯೂ ಕಾಣುತ್ತಿರುವುದು ಸಹಜ. ಹಾಗೆ ಜೀವನಿಗೆ ಸುಖಸಾಧನವೆನಿಸಿದ ಅಂತಃಕರಣದ ಮೇಲೆ ಹೆಚ್ಚು ಮಮತೆಯಿರುವುದರಿಂದ ಅದರ ಗುಣಗಳನ್ನು ತಾನು ಅಂಟಿಸಿಕೊಳ್ಳುವುದು ಸ್ವಭಾವ. ಆದರೆ ಅವನಿಗೆ ಅಂತಃಕರಣವಲ್ಲದೆ ಬೇರೆ ಯಾವ ವಿಶ್ರಾಂತಿಸ್ಥಲವೂ ದೊರೆಯಲಾರದು. ಅಲ್ಲಿ ಖಾಯಂ ವಾಸವಾಗಿದ್ದು ಇಂದ್ರಿಯಗಳು ಕರೆದಾಗ ಅಲ್ಲೆಲ್ಲಾ ಹೋಗಿ ಸುಖದುಃಖಗಳನ್ನು ಅನುಭವಿಸಿ ಕೊನೆಗೆ ತನ್ನ ಗೂಡಿಗೇ ಅವನು ಬರಬೇಕಾಗುವುದು. ಆದ್ದರಿಂದಲೇ ಅವನಿಗೆ ಅದರ ಮೇಲೆ ಹೆಚ್ಚು ಮಮತೆ ಇದೆ. ಇದು ಅತಿರೇಕಕ್ಕೆ ಏರಿ ಅದರಿಂದ ಆಗಿರುವ ಅನರ್ಥಪರಂಪರೆಗಳನ್ನು ಅವನು ಅನುಭವಿಸಿ ಬೇಸರಗೊಳ್ಳುವವರೆಗೂ ಅವನಿಗೆ ಆ ವ್ಯಾಮೋಹವು ತೊಲಗುವುದಿಲ್ಲ. ಹೀಗೆ ಮೋಹಪಾಶದಲ್ಲಿ ಸಿಲುಕಿರುವ ಜೀವನಿಗೆ ತನ್ನ ಶಕ್ತಿಸಂಕೋಚದಿಂದ ತಾನು ಅನುಭವಿಸುತ್ತಿರುವ ದುಃಖಮಿಶ್ರವಾದ ಅಲ್ಪಸುಖವೇ ದೊಡ್ಡದಾಗಿ ಕಾಣುವುದು. ಈ ಬಗೆಯ ಸುಖದುಃಖಾನುಭವದಲ್ಲಿ ಅವನಿಗೆ ಜುಗುಪ್ಸೆಯು ಹುಟ್ಟುವವರೆಗೂ ಅವನಿಗೆ ಇದೇ ಪ್ರಿಯವಾಗಿ ಕಾಣುವುದು.

ಇಂತಹ ಪರಿಸ್ಥಿತಿಯಲ್ಲಿ ಅವನಿಗೆ ತನ್ನೊಳಗಿರುವ ಪರಮಾ

ತ್ಮನ ಕರುಣೆಯಿಂದ ಆಗಾಗ್ಗೆ ಕೊಂಚವಾದರೂ ಜುಗುಪ್ಸೆ ಹುಟ್ಟು ತ್ತದೆ. ಮನೆಯ ಅಲಂಕಾರವಲ್ಲಿಯೇ ತೊಡಗಿದ ಯಾವ ಮಾನ ವನು ಅಲಂಕಾರದ ವೈಶಿಷ್ಟ್ಯವನ್ನು ಇತರರಿಗೆ ತಿಳಿಯಪಡಿಸ ಲಿಕ್ಕಾಗಿ ಕೆಲವು ವೇಳೆ ತನ್ನ ಬಟ್ಟೆಗಳಿಗೂ ಅದನ್ನು ಅಂಟಿಸಿ ಕೊಳ್ಳುವುದುಂಟು. ಹೀಗೆ ಬಿಳುಪು, ಕೆಂಪು, ಕಪ್ಪು ಬಣ್ಣ ಗಳನ್ನು ಅವನು ತನ್ನ ಬಟ್ಟೆಗಳಿಗೂ ಒತ್ತಿಕೊಂಡು ಎಲ್ಲರಿಗೂ ತೋರಿಸುವನು. ಇದನ್ನು ಅವನು ಕೆಲವು ಕಾಲ ನಡೆಸಿದರೂ ಕೊನೆಗೆ ಅವನಿಗೇ ಅದರ ಬಗ್ಗೆ ಜುಗುಪ್ಸೆ ಹುಟ್ಟುತ್ತದೆ. ಆಗ ಅವನು ತಾನಾಗಿಯೇ ಅದನ್ನು ತೊರೆದು ತನ್ನ ಶುಭ್ರವಸ್ತ್ರ ದೊಡನೆಯೇ ಹೊರಗೆ ಹೊರಡುತ್ತಾನೆ. ಹಾಗೆ ಜೀವಾತ್ಮನು ಕೆಲವು ವೇಳೆ ನಾಮದಮನೆ ಎಂಬ ಅಭಿಮಾನದಿಂದ ಅಂತಃಕರಣ ಧರ್ಮವನ್ನು ಬಳಿದುಕೊಂಡರೂ ಗೀತೋಪನಿಷತ್ತುಗಳ ಸದುಪ ದೇಶಾಮೃತವನ್ನು ಕೇಳಿ ತನ್ನ ದುರಭಿಮಾನಕ್ಕಾಗಿ ಬೇಸರ ಗೊಂಡು ತನ್ನ ಸ್ವರೂಪವನ್ನು ಅರಿಯಲಿಕ್ಕೂ, ತನ್ನೊಳಗಿನ ಪರಮಾತ್ಮನೊಡನೆ ಸಮರಸವಾಗಿ ಬೆರೆಯಲಿಕ್ಕೂ, ತಾನು ಅವನಿಗೆ ಶರಣಾಗತನಾಗಲಿಕ್ಕೂ ಆ ಈಶ್ವರನ ಪ್ರೇರಣೆಯಂತೆಯೆ ಪ್ರಯತ್ನಮಾಡಬಹುದು. ಒಟ್ಟಿನಲ್ಲಿ ಜೀವನು ತನ್ನ ಶಕ್ತಿ ಸಂಕೋಚದಿಂದ ತನಗೆ ಆಗಿರುವ ಅಪಾರಹಾನಿಯನ್ನು ಅರಿಯದ ಹೊರತು ತನ್ನ ಆನಂದವನ್ನು ಅನುಭವಿಸಲಾರನು. ಕಳೆದು ಕೊಂಡ ತನ್ನ ಶಕ್ತಿಯನ್ನು ಮತ್ತೆ ವಿಕಾಸಗೊಳಿಸಿಕೊಂಡು ತಾನು ಸಿಜಾನಂದವನ್ನು ಅನುಭವಿಸಬೇಕೆಂಬ ಬಯಕೆ ಅವನಲ್ಲಿ ಒಂದಿ ಲ್ಲೊಂದುವೇಳೆ ಈಶ್ವರಾನುಗ್ರಹದಿಂದ ಹುಟ್ಟಲಿಕ್ಕೇ ಬೇಕು. "ಭಯಕೃತ್ ಭಯನಾಶನಃ" ಭಯವನ್ನು ಹುಟ್ಟಿಸಿದವನೇ ಭಯವನ್ನು ತೊಲಗಿಸುವನು. ಜೀವನಿಗೆ ಪ್ರಬಲವಾದ ಅಡಚಣೆ

ಯನ್ನು ತಂದೊಡ್ಡಿದ ಪರಮಾತ್ಮನೇ ಜೀವನ ಮೇಲೆ ಅವ್ಯಾಜ ಪ್ರೇಮದಿಂದ ಅವನ ವರ್ತನೆಯನ್ನು ಅಂತಃಕರಣದ ದುಷ್ಪ್ರಭಾವದಿಂದ ತನ್ನ ಕಡೆಗೆ ತಿರುಗಿಸಿಕೊಳ್ಳುವನು. ಜೀವನಿಗೆ ತನ್ನ ದುರ್ವರ್ತನೆಯ ಬಗ್ಗೆ ಕೊಂಚ ಜುಗುಪ್ಸೆಯುಂಟಾದ ಸನ್ನಿವೇಶದಲ್ಲೂ, ಅವನು ಅದಕ್ಕಾಗಿ ಪಶ್ಚಾತ್ತಾಪವನ್ನು ಅನುಭವಿಸಿದ ವೇಳೆಯಲ್ಲೂ, ಪರಮಾತ್ಮನು ಅವನನ್ನು ತನ್ನ ಕೃಪಾದೃಷ್ಟಿಯಿಂದ ನೋಡತೊಡಗುವನು. ಇದರಿಂದ ಅವನಲ್ಲಿ ಜ್ಞಾನೋದಯವುಂಟಾಗಿ ಅವನ ಶಕ್ತಿಯು ವಿಕಾಸವಾಗತೊಡಗುವುದು.

## ಶಕ್ತಿ ವಿಕಾಸವಾಗುವ ಬಗೆ

ಶಕ್ತಿವಿಕಾಸವೆಂದರೇನು? ಇದು ಮಾನವನ ದೇಹಕ್ಕೆ ಸಂಬಂಧಿಸಿದೆಯೋ? ಅಥವಾ ಮನಸ್ಸಿಗೆ ಸಂಬಂಧಿಸಿದೆಯೋ? ಅಥವಾ ಆತ್ಮನಿಗೆ ಸಂಬಂಧಿಸಿದೆಯೋ! ಅಥವಾ ಈ ಮೂರು ವಸ್ತುಗಳಿಗೂ ಸಂಬಂಧಿಸಿದೆಯೋ? ಇದು ಮಾನವನಲ್ಲಿ ಸಂಘಟಿಸುವ ಬಗೆ ಹೇಗೆ? ಈ ಅಂಶಗಳನ್ನು ಇಲ್ಲಿ ವಿವೇಚಿಸಲಾಗುವುದು. ಉಪನಿಷತ್ಕಾರರು ಮಾನವನ ವಿಕಾಸದ ಬಗ್ಗೆ ಹೇಳಿರುವ ಮಾತು ಈ ಸಂದರ್ಭದಲ್ಲಿ ಸ್ಮರಣೀಯವೆನಿಸಿದೆ. "ಆಶಿಷ್ಠೋ ದ್ರಢಿಷ್ಠೋ ಬಲಿಷ್ಠಃ" ಎಂಬುದೇ ಆ ಮಾತು. ಇಲ್ಲಿ ಅವರು ಮೂರು ಅಂಶಗಳನ್ನು ತಿಳಿಸಿದ್ದಾರೆ; ಆಶಿಷ್ಠಃ ಎಂಬುದು ಆತ್ಮನಿಗೂ, ದ್ರಢಿಷ್ಠಃ ಎಂಬುದು ಮನಸ್ಸಿಗೂ, ಬಲಿಷ್ಠಃ ಎಂಬುದು ದೇಹಕ್ಕೂ ಅನ್ವಯಿಸುವುದಾಗಿ ಇದರಿಂದ ತಿಳಿದುಬರುತ್ತದೆ. ದೇಹವು ಬಲವಾಗಿದ್ದರೆಯೇ ಮಾನವನಿಂದ ವೀರ್ಯವತ್ತರವಾದ ಕ್ರಿಯೆ ನಡೆಯಲಿದೆ. ದೇಹದ ಬಲವಿಲ್ಲದವನಿಂದ ತನಗಾಗಲೀ ಇತರರಿಗಾಗಲೀ ಯಾವ ಕ್ರಿಯೆಯೂ ನಡೆಯಲಾರದು. ಅಲ್ಲಿಗೆ

'ಬಲಿಷ್ಠಃ' ಎಂಬುದು ಮಾನವನಲ್ಲಿ ಕ್ರಿಯಾಶಕ್ತಿಯ ವಿಕಾಸ ವನ್ನು ವ್ಯಕ್ತಪಡಿಸುತ್ತದೆ. ಮನಸ್ಸು ಸಹಜವಾಗಿ ಚಂಚಲವಾದ್ದ ರಿಂದ ಅದನ್ನು ಮಾನವನು ಉಗ್ರಸಾಧನದಿಂದ ದೃಢಪಡಿಸ ಬೇಕೆಂಬುದು "ದ್ರಢಿಷ್ಠ" ಎಂಬ ಶಬ್ದದಿಂದ ತಿಳಿದುಬರುತ್ತದೆ. ಮನೋದಾರ್ಢ್ಯವಿಲ್ಲದವನು ಉದಾತ್ತವಾದ ಆಲೋಚನೆಗಳನ್ನು ಕೈಗೊಳ್ಳಲಾರನು. ಅಂತವನು ಉನ್ನತವಾದ ವಿಚಾರಗಳ ವಿವೇ ಚನೆಯಲ್ಲಿಯೇ ತೊಡಗಲಾರನು. ಯಾವನ ಮನಸ್ಸು ನಿಶ್ಚಲ ವಾಗಿದೆಯೋ ಅವನೇ ವಿಶಾಲದೃಷ್ಟಿಯಿಂದ ವಿವೇಚನೆಮಾಡ ಬಲ್ಲನು. ಆದ್ದರಿಂದ ಮನೋದಾರ್ಢ್ಯವು ಮಾನವನ ಜ್ಞಾನ ಶಕ್ತಿಯ ವಿಕಾಸವನ್ನು ವ್ಯಕ್ತಪಡಿಸುತ್ತದೆ. "ಆಶಿಷ್ಠ:" ಎಂಬುದು ಆತ್ಮಶಕ್ತಿಯ ವಿಕಾಸವನ್ನು ತಿಳಿಸುತ್ತದೆ. ಆತ್ಮಶಕ್ತಿಯನ್ನು ವಿಕಾಸಗೊಳಿಸಿದವನೇ ಉದಾತ್ತವಾದ ಬಯಕೆಗಳನ್ನು ಹೊಂದಿ ರುವನು. ಆಧ್ಯಾತ್ಮತೇಜಸ್ಸನ್ನು ಸಾಧಿಸದವನಲ್ಲಿ ವಿಶಾಲವಾದ ಬಯಕೆಯೇ ಹುಟ್ಟುವುದಿಲ್ಲ. ತೇಜಸ್ವಿಯೇ ಭೂಮವಸ್ತುವನ್ನು ಬಯಸುವನು. ಸದ್ವಸ್ತುವಿನಲ್ಲಿ ಸಮರಸವಾಗಿ ಬೆರೆತು ನಿರ್ಲಿಪ್ತತೆ ಯಿಂದ ಬಾಳಬೇಕೆಂಬುದೇ ಹಿರಿಯ ಆಶೆ. ಇಂತಹ ಆಶೆ ಆತ್ಮ ಶಕ್ತಿಯಿಲ್ಲದವರಿಗೆ ಎಂದೆಂದಿಗೂ ಹುಟ್ಟಲಾರದು. ಆದ್ದರಿಂದ 'ಆಶಿಷ್ಠಃ' ಎಂಬಲ್ಲಿ ಉಪನಿಷತ್ಕಾರರು ಇಚ್ಛಾಶಕ್ತಿಯ ಪೂರ್ಣ ವಿಕಾಸವನ್ನು ಸೂಚಿಸಿದ್ದಾರೆ. ಹೀಗೆ ಶಕ್ತಿವಿಕಾಸವೆಂಬ ಪದವು ದೇಹದ, ಮನಸ್ಸಿನ ಮತ್ತು ಆತ್ಮದ ಶಕ್ತಿಗಳನ್ನು ಮಾನವನು ಅಭ್ಯಾಸದಿಂದ ಹೆಚ್ಚಿಸಿಕೊಳ್ಳಬೇಕೆಂಬ ಉದಾರವೂ ಸಹಜವೂ ಆದ ಅರ್ಥವನ್ನು ಸೂಚಿಸುತ್ತದೆ.

ಈ ಬಗೆಯ ವಿಕಾಸವೇ ಪರಿಪೂರ್ಣತೆ ಎನಿಸುತ್ತದೆ. ಇವು ಮೂರು ಅಂಶಗಳೂ ಸಮಪ್ರಮಾಣದಲ್ಲಿ ವಿಕಾಸಗೊಂಡರೆ

ಮಾತ್ರವೇ ಮಾನವಜೀವನವು ಸುಂದರವೂ, ಪರಿಪೂರ್ಣವೂ ಆಗುತ್ತದೆ. ಈ ಮೂರು ಭಾಗಗಳನ್ನೂ ಒಂದೇಬಗೆಯಲ್ಲಿ ವಿಕಾಸಗೊಳಿಸುವುದರಿಂದಲೇ ಮಾನವನು ಆತ್ಮಕಲ್ಯಾಣವನ್ನು ಸಾಧಿಸಬಲ್ಲನು. ಇವುಗಳಲ್ಲಿ ಒಂದು ಹೆಚ್ಚಾಗಿದ್ದು ಮತ್ತೆರಡು ಕಡಮೆಯಾಗಿದ್ದರೂ ಅದರಿಂದ ಜೀವನದಲ್ಲಿ ಒಂದು ಕೊರತೆಯೇ ಉಳಿದೀತು. ಆದ್ದರಿಂದ ವರ್ಧಿಷ್ಣುಗಳಾದ ಯುವಯುವತಿಯರು ದೇಹ ಮನ, ಆತ್ಮಗಳ ಸರ್ವತೋಮುಖವಾದ ವಿಕಾಸಕ್ಕೆ ಸಮನ್ವಯ ದೃಷ್ಟಿಯಿಂದ ಪ್ರಯತ್ನಿಸುವುದು ಶ್ರೇಯಸ್ಕರ. ಅಂತವನೇ ಸಾರ್ವಜನಿಕಹಿತವನ್ನು ಬಯಸುತ್ತಲೂ, ವಿವೇಚಿಸುತ್ತಲೂ, ರಚಿಸುತ್ತಲೂ ನೆಮ್ಮದಿಯಿಂದ ಬಾಳಬಲ್ಲನು. ವಿಶಾಲವಾದ ಬಯಕೆ, ವಿವೇಚನೆ ಮತ್ತು ರಚನೆಗಳಿಂದ ಮಾನವನು ತೃಪ್ತನೂ, ಸುಖಿಯೂ, ಶಾಂತನೂ ಆಗುವನು. ಈ ಬಗೆಯ ಪರಸ್ಪರ ಹೊಂದಿಕೆಯ ಜೀವನವನ್ನು ನಡೆಸುವುದೇ ಶಕ್ತಿವಿಕಾಸವೆನಿಸುತ್ತದೆ. ಇದರಿಂದ ಮಾನವನಲ್ಲಿ ಸಹಜವಾಗಿ ಅಂಟಿಕೊಂಡಿದ್ದ ಸ್ವಾರ್ಥತೆ, ವ್ಯಾಮೋಹ, ಅಹಂಕಾರಗಳು ತೊಲಗುವವು.

ಅವನ ಸ್ವಾಭಾವವೆನಿಸಿದ್ದ ಇಚ್ಛಾಶಕ್ತಿಯು ಸತ್ತ್ವಗುಣದಿಂದ ಆವೃತವಾಗಿ ಸಂಕೋಚಗೊಂಡು ಸ್ವಾರ್ಥತೆ ಎನಿಸಿತ್ತು. ಈ ಸ್ವಾರ್ಥತೆ ಅವನಲ್ಲಿ ಸಹಜವಾಗಿ ಅಂಟಿಕೊಂಡಿರುವುದರಿಂದ ಅದು ಹೇಗೆ ತೊಲಗುತ್ತದೆ? ಅದರ ಸ್ಥಾನದಲ್ಲಿ ಇಚ್ಛಾಶಕ್ತಿ ಹೇಗೆ ಸಂಘಟಿಸುತ್ತದೆ? ಎಂಬುದೇ ಇಲ್ಲಿ ಆಲೋಚನೀಯವಾದ ವಿಷಯ. ಒಬ್ಬನ ಸ್ವಭಾವ ಎಂದೆಂದಿಗೂ ಬದಲಾವಣೆಯಾಗುವಂತಿಲ್ಲ. ಜೀವನು ಸದಾನಂದನಾದ್ದರಿಂದ ಅವನಲ್ಲಿ ಇಚ್ಛಾಶಕ್ತಿಯು ಸಹಜವಾಗಿತ್ತು. ಆದರೆ ಅದು ಸತ್ತ್ವಗುಣದಿಂದ ಸಂಕೋಚಗೊಂಡು ಸ್ವಾರ್ಥತೆ ಎನಿಸಿತ್ತು. ಇದು ಮತ್ತೆ ವಿಕಾಸಗೊಂಡು

ಇಚ್ಛಾಶಕ್ತಿಯಾಗಬೇಕಾಗಿದೆ. ಸ್ವಭಾವದಲ್ಲಿ ಹೀಗೆ ಸಂಕೋಚ ವಿಕಾಸಗಳಾಗುವುದನ್ನು ನಂಬಬಹುದೆ? ಇದು ಸಾಧ್ಯವೆ? ಹಾಗೆ ಸಾಧ್ಯವಾಗುವುದಾದರೂ ಅದು ತಾನಾಗಿಯೇ ಆಗುತ್ತದೆಯೆ? ಅಥವಾ ಜೀವನು ಅದಕ್ಕಾಗಿ ಯಾವುದಾದರೂ ಸಾಧನವನ್ನು ಕೈಗೊಳ್ಳಬೇಕೆ? ಈ ವಿಷಯಗಳು ಇಲ್ಲಿ ಗಮನಾರ್ಹವೆನಿಸಿವೆ.

ಒಬ್ಬನ ಸ್ವಭಾವವು ಅಭ್ಯಾಸಕ್ರಮದಿಂದ ಬದಲಾವಣೆಯಾಗುವುದನ್ನು ನಾವು ಲೋಕದಲ್ಲೂ ಕಾಣಬಹುದು. ಪರುಷಮಣಿಯ ಸಂಪರ್ಕದಿಂದ ತಾಮ್ರವು ಚಿನ್ನವಾಗಿ ಪರಿಣಮಿಸುತ್ತದೆ. ತಾಮ್ರದ ಸ್ವರೂಪವೇ ಇಲ್ಲಿ ಬೇರೆಯಾಗುತ್ತದೆ. ಗುಂಗೀಹುಳವು ಭ್ರಮರವನ್ನು ನೋಡುತ್ತ, ಅದರ ಶಬ್ದವನ್ನು ಕೇಳುತ್ತ, ಅದರ ವಾಸನೆಯನ್ನು ಮೂಸಿಸುತ್ತ, ಅದರ ರೆಕ್ಕೆಗಳಿಂದ ಬಡಿಸಿಕೊಳ್ಳುತ್ತ, ಅದರ ಬಾಯಿಂದ ಬೀಳುವ ರಸವನ್ನು ನೆಕ್ಕುತ್ತ, ಸರ್ವೇಂದ್ರಿಯಗಳ ಮೂಲಕವೂ ಭ್ರಮರದ ಸಂಪರ್ಕವನ್ನು ಪಡೆದು, ಅನುಭವಿಸಿ ಕೊನೆಗೆ ಅದು ಭ್ರಮರವೇ ಆಗಿ ಪರಿಣಮಿಸುವುದು. ಸ್ವಾತೀನಕ್ಷತ್ರದ ನೀರು ಕಪ್ಪೆಚಿಪ್ಪಿನ ಮೇಲೆ ಬಿದ್ದು ಮುಚ್ಚಿಕೊಂಡು ಸಮುದ್ರದ ತಳಕ್ಕೆ ಹೋಗಿದ್ದು ನಿರ್ದಿಷ್ಟಕಾಲದಲ್ಲಿ ಮುತ್ತಾಗಿ ಪರಿಣಮಿಸುತ್ತದೆ. ಹೀಗೆ ವಸ್ತುಗಳಲ್ಲಿ ರೂಪಾಂತರದ ಮೂಲಕ ಸ್ವಭಾವವೇ ಬದಲಾಯಿಸುವುದನ್ನು ಲೋಕದಲ್ಲಿ ವಿಶೇಷವಾಗಿ ಕಾಣಬಹುದು. ಇಂತಹ ಸ್ಥಿತಿಯಲ್ಲಿ ಜೀವಾತ್ಮನ ಸದ್ರೂಪದ ಸ್ವಭಾವವೆನಿಸಿದ ಇಚ್ಛಾಶಕ್ತಿಯು ಸಂಕೋಚಗೊಂಡು ಅಣವಮಲವೆನಿಸಿದ್ದು, ಈ ಸಂಕೋಚದ ಮೂಲವೆನಿಸಿದ ಸತ್ತ್ವಗುಣವೇ ಸದ್ರೂಪದಲ್ಲಿ ಪರಿಣಮಿಸುವುದರಿಂದ ಆಣವಮಲವು ಮತ್ತೆ ಇಚ್ಛಾಶಕ್ತಿಯಾಗಿ ಪರಿಣಮಿಸುವುದರಲ್ಲಿ ವಿರೋಧವೇನಿದ್ದೀತು? ಜೀವಾತ್ಮನ ಮಾನವೀಪ್ರಕೃತಿಯೇ ದೈವೀಪ್ರಕೃತಿ

ಯಾಗಿ ಪರಿಣಮಿಸುವುದರಿಂದ ಅವನಲ್ಲಿ ಸಹಜವಾಗಿದ್ದ ಇಚ್ಛಾ ಶಕ್ತಿಯು ಸಂಕೋಚಗೊಂಡಿದ್ದರೂ ಮತ್ತೆ ವಿಕಾಸವಾಗುವುದ ರಲ್ಲಿ ಆಶ್ಚರ್ಯವೇನಿದ್ದೀತು? ಹೀಗೆ ಸತ್ತ್ವರಜಸ್ತಮೋಗುಣ ಗಳೇ ಸತ್ಯಜ್ಞಾನಾನಂದಗಳಾಗಿ ಪರಿಣಮಿಸುವುದರಿಂದ ಅವನ ಇಚ್ಛಾಜ್ಞಾನಕ್ರಿಯಾಶಕ್ತಿಗಳು ಸಹಜವಾಗಿ ಸಂಕೋಚಗೊಂಡು ಆಣವ, ಮಾಯೀಯ, ಕಾರ್ಮಿಕಮಲಗಳಾಗಿ ಪರಿಣಮಿಸಿದ್ದರೂ ಅವು ಮತ್ತೆ ತಮ್ಮ ಸ್ವಾಭಾವಿಕವಾದ ವಿಕಾಸಸ್ಥಿತಿಯನ್ನು ಹೊಂದುವುದರಲ್ಲಿ ವ್ಯತ್ಯಾಸವೇನೂ ಕಾಣುವುದಿಲ್ಲ. ಚಿದ್ರೂಪದ ಸ್ವಭಾವವೆನಿಸಿದ ಜ್ಞಾನಶಕ್ತಿಯು ಮಾಯೀಯ ಮಲವಾಗಿ ಸಂಕೋಚಗೊಂಡಿದ್ದರೂ ರಜೋಗುಣದ ಚಿತ್ಪರಿಣಾಮದಿಂದ ಮತ್ತೆ ಸ್ವಾಭಾವಿಕವಾದ ವಿಕಾಸಸ್ಥಿತಿಯನ್ನು ಹೊಂದುವುದರಲ್ಲಿ ಯಾವ ವಿರೋಧವೂ ಇಲ್ಲ. ಹಾಗೆಯೇ ಆನಂದರೂಪದ ಸ್ವಭಾವವೆನಿಸಿದ ಕ್ರಿಯಾಶಕ್ತಿಯು ಕಾರ್ಮಿಕಮಲ(ಅಹಂಕಾರ) ವಾಗಿ ಸಂಕೋಚಗೊಂಡಿದ್ದರೂ ತಮೋಗುಣದ ಆನಂದಪರಿಣಾ ಮದಿಂದ ಮತ್ತೇ ತನ್ನ ಸ್ವಾಭಾವಿಕವಾದ ವಿಕಾಸಸ್ಥಿತಿಯನ್ನು ಹೊಂದುವುದರಲ್ಲಿ ಯಾವ ಅನೌಚಿತ್ಯವೂ ಕಾಣುವುದಿಲ್ಲ.

## ಇಚ್ಛಾಶಕ್ತಿಯ ವಿಕಾಸ

ಜೀವನು ಕಳೆದುಕೊಂಡಿದ್ದ ಇಚ್ಛಾಜ್ಞಾನಕ್ರಿಯಾಶಕ್ತಿಗಳನ್ನು ಮತ್ತೆ ವಿಕಾಸಗೊಳಿಸುವ ಬಗೆ ಹೇಗೆ? ಎಂಬುದೇ ಇಲ್ಲಿ ವಿಚಾ ರಾರ್ಹವಾದ ಸಮಸ್ಯೆ, ಶಕ್ತಿವಿಕಾಸವೇ ಜೀವನ ಪರಮೈಶ್ವರ್ಯ. ಇದನ್ನು ಒಮ್ಮೆ ಕಳೆದುಕೊಂಡಮೇಲೆ ಮತ್ತೆ ಪಡೆಯಬೇಕಾದರೆ ಅವನು ಮಾಡಬೇಕಾದ ಸಾಧನ ಯಾವುದು? ಸ್ವಾಭಾವಿಕವಾದ ಶಕ್ತಿಯನ್ನು ಅವನು ಮಾಯೆಯ ಗುಣಗಳ ಪ್ರಭಾವದಿಂದ

ಕಳೆದುಕೊಂಡಿದ್ದನು. ಅವನ್ನು ಮತ್ತೆ ಪಡೆಯಬೇಕಾದರೆ ಅವನು ಯಾವ ಕ್ರಿಯೆಯನ್ನಾಚರಿಸಬೇಕು? ಇದಕ್ಕೆ ಕ್ರಿಯೆ ಯೊಂದೇ ಸಾಕೆ? ಅಥವಾ ಜ್ಞಾನ ಒಂದೇ ಸಾಕೆ? ಅಥವಾ ಎರಡೂ ಬೇಕೆ? ಆದರೆ ಕೇವಲ ಜ್ಞಾನದಿಂದಾಗಲೀ, ಕೇವಲ ಕ್ರಿಯೆಯಿಂದಾಗಲೀ ಜೀವನಿಗೆ ಶಕ್ತಿವಿಕಾಸವಾಗಲಾರದು. ಆಕಾಶದಲ್ಲಿ ಓಡಾಡುವ ಪಕ್ಷಿಗಳಿಗೆ ಎರಡು ರೆಕ್ಕೆಗಳು ಹೇಗೆ ಆವಶ್ಯಕವೋ ಹಾಗೆ ಜೀವನಿಗೆ ಶಕ್ತಿವಿಕಾಸವಾಗಲು ಜ್ಞಾನ ಕ್ರಿಯೆಗಳೆರಡೂ ಆವಶ್ಯಕವೆನಿಸಿವೆ.

"ಶಬ್ದಾರ್ಥೌಸತ್ಕವಿರಿವ ದ್ವಯಂ ವಿದ್ವಾನಪೇಕ್ಷತೇ" ಸತ್ಕಾವ್ಯವನ್ನು ರಚಿಸುವವನು ರಮಣೀಯವಾದ ಅರ್ಥವನ್ನೂ, ಅದನ್ನು ತಿಳಿಸುವಂತಹ ಮಧುರವಾದ ಶಬ್ದವನ್ನೂ ಅಪೇಕ್ಷಿಸುವಂತೆ ಸದ್ಭಕ್ತನು ತನ್ನ ಶಕ್ತಿವಿಕಾಸಕ್ಕೆ ಜ್ಞಾನಕ್ರಿಯೆಗಳೆರಡನ್ನೂ ಅಪೇಕ್ಷಿಸುತ್ತಾನೆ. ಇದು ಸಮನ್ವಯಮಾರ್ಗವೆನಿಸಿದೆ. ಇದರಲ್ಲಿ ಯಾವ ಬಗೆಯ ಅನೌಚಿತ್ಯಕ್ಕೂ ಅವಕಾಶವಿರುವುದಿಲ್ಲ. ಕೇವಲ ಜ್ಞಾನದಿಂದಾಗಲೀ, ಕೇವಲ ಕ್ರಿಯೆಯಿಂದಾಗಲೀ ಭಕ್ತನು ತನ್ನ ಶಕ್ತಿಯನ್ನು ವಿಕಾಸಗೊಳಿಸಲಾರನು. ಕ್ರಿಯೆಯೊಡಗೂಡಿದ ಜ್ಞಾನದಿಂದಲೇ ಪರಮಾತ್ಮನು ಭಕ್ತರಿಗೆ ಪ್ರಸನ್ನನಾಗುವನು. "ಸತ್ಕ್ರಿಯಾಯುಕ್ತಂ ಸಮ್ಯಗ್ ಜ್ಞಾನಂ ಮೋಕ್ಷತರೋರ್ಬೀಜಂ" ಎಂದು ಶಂಕರಾಚಾರ್ಯರು ಹೇಳಿದ್ದು ಇಲ್ಲಿ ಸಮಂಜಸವಾಗಿ ಹೊಂದುತ್ತದೆ. ಹೀಗೆ ಸತ್ಕ್ರಿಯೆಯೊಡಗೂಡಿದ ಸದಮಳ ಜ್ಞಾನವೇ ಜೀವನ ಶಕ್ತಿವಿಕಾಸಕ್ಕೆ ಸಾಧಕವಾಗಿದೆ.

ಈ ಬಗೆಯ ಸಮನ್ವಯದೃಷ್ಟಿಯಿಂದ ಮಾನವನು ತನ್ನ ಇಚ್ಛಾಶಕ್ತಿಯ ವಿಕಾಸವನ್ನು ಹೇಗೆ ಸಾಧಿಸುವನು? ಎಂಬುದನ್ನು ಇಲ್ಲಿ ವಿಮರ್ಶಿಸಲಾಗುವುದು. ಮಾನವನಲ್ಲಿ ಇಚ್ಛಾ

ಶಕ್ತಿಯು ಸತ್ತ್ವಗುಣದ ಆವರಣದಿಂದ ಸಂಕೋಚಗೊಂಡಿರುವು ದೆಂದು ಹಿಂದೆಯೇ ತಿಳಿಸಲಾಗಿದೆ. ಈಗ ಸತ್ತ್ವಗುಣವು ಸದ್ರೂಪವಾಗಿ ಪರಿಣಮಿಸುವುದು ಹೇಗೆ? ಎಂಬ ಸಮಸ್ಯೆ ಮೊದಲು ಬಗೆಹರಿಯಬೇಕಾಗಿದೆ. ಇದರಿಂದ ಎಲ್ಲವೂ ಸಮಂಜಸವಾಗಿ ಹೊಂದಿಕೆಯಾಗುತ್ತದೆ. ಸತ್ತ್ವಗುಣವು ಸದ್ರೂಪವಾಗಬೇಕಾಗಿದೆ. ಜೀವನು ತನ್ನನ್ನು ಸತ್ತ್ವಗುಣವೆಂದು ಭಾವಿಸದೆ ತಾನೇ ಸದ್ರೂಪನೆಂದು ಯಾವಾಗಲೂ ಚಿಂತಿಸುತ್ತಿರಬೇಕು. "ತಸ್ಯಾಭಿಧ್ಯಾನಾತ್ ತದ್ಯೋಜನಾತ್ ತತ್ತ್ವಭಾವಾತ್ ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ" ಎಂಬ ಶ್ವೇತಾಶ್ವತಶ್ರುತಿಯ ಮಂತ್ರವು ಮಾನವೀಶಕ್ತಿಯು ದೈವೀಶಕ್ತಿಯಾಗಿ ಪರಿಣಮಿಸುವ ವಿಧಾನವನ್ನು ತಿಳಿಯಪಡಿಸುತ್ತದೆ; ಹಾಗೆಯೇ ಈ ಬಗೆಯ ಪರಿಣಾಮದಿಂದ ಜೀವನಿಗೆ ಆಗುವ ಫಲವನ್ನು ತಿಳಿಸುತ್ತದೆ. "ವಿಶ್ವಮಾಯಾನಿವೃತ್ತಿಃ" ಎಂಬ ಪದವು ಮಾಯೆಯ ಮೂರುಗುಣಗಳು ತಮ್ಮ ಹಿಂದಿನ ಸ್ಥಿತಿಗೆ ತೊಲಗುವುದನ್ನು ವ್ಯಕ್ತಪಡಿಸುತ್ತದೆ. ಇಲ್ಲಿ ನಿವೃತ್ತಿ ಎಂದರೆ ಪೂರ್ಣನಾಶವಲ್ಲ; ಆದರೆ ಹಿಂದಿನ ಸ್ಥಿತಿಗೆ ಸೇರುವಿಕೆ ಎಂದರ್ಥ. ಅಲ್ಲಿಗೆ ಸತ್ತ್ವಗುಣವು ಸದ್ರೂಪವನ್ನೂ, ರಜೋಗುಣವು ಚಿದ್ರೂಪವನ್ನೂ, ತಮೋಗುಣವು ಆನಂದರೂಪವನ್ನೂ ಪಡೆಯುತ್ತವೆ ಎಂಬುದೇ ನಿವೃತ್ತಿ ಪದದ ಅರ್ಥ. ಎಲ್ಲವೂ ಪರಮಾತ್ಮನಿಂದಲೇ ಬಂದು ಕೊನೆಗೆ ಅವನಲ್ಲಿಯೇ ಸೇರುವುದರಿಂದಲೂ, ಎಲ್ಲವೂ ಅವನ ಪರಿಣಾಮವೇ ಆದ್ದರಿಂದಲೂ ಯಾವ ವಸ್ತುವಿಗೂ ಅಳಿವಿಲ್ಲ. ಇಲ್ಲದ ವಸ್ತುವಿಗೆ ಉಳಿವೇ ಇಲ್ಲ. ಯಾವಾಗಲೂ ಇರುವ ವಸ್ತುವಿಗೆ ಅಳಿವೇ ಸಂಭವಿಸುವಂತಿಲ್ಲ. ಹೀಗೆ ಜೀವನು ನಿರಂತರವೂ ತನ್ನ ಸದ್ರೂಪವನ್ನು ನೆನೆಯುವುದರಿಂದ ಸತ್ತ್ವಗುಣವು ಸದ್ರೂಪ

ದಿಂದಲೇ ಪರಿಣಮಿಸುತ್ತದೆ. ಸದ್ವಸ್ತುವೆಂದರೆ ಸನಾತನ ಸತ್ಯ ವಸ್ತುವೆಂದರ್ಥ. ಯಾವಾಗಲೂ ಅಚ್ಚಳಿಯದೆ ನಿತ್ಯಸುಂದರ ವೆನಿಸಿ ನೆಲೆಯಾಗಿ ನಿಂತಿರುವ ವಸ್ತುವೇ ಸದ್ರೂಪವೆನಿಸುತ್ತದೆ. ಇಂತಹ ವಸ್ತುವನ್ನು ಜೀವನು ನಿರಂತರವೂ ನೆನೆಯುವುದೇ 'ತಸ್ಯಾಭಿಧ್ಯಾನಾತ್' ಎಂಬ ಶ್ರುತಿಗೆ ಅರ್ಥವಾಗುವುದು. ಅದರಲ್ಲೂ ಇದು ಸಾಮಾನ್ಯವಾದ ಧ್ಯಾನವಲ್ಲ; ಮತ್ತೆ ಮತ್ತೆ ಜೀವನು ತನ್ನಲ್ಲಿ ಒಳಗೂ ಹೊರಗೂ ಸುತ್ತಲೂ ಎಲ್ಲಾ ಕಡೆ ಗಳಲ್ಲೂ ಧ್ಯಾನಿಸುವುದೇ "ಅಭಿಧ್ಯಾನ" ವೆನಿಸುತ್ತದೆ. ಇದೇ ನಿರಂತರಚಿಂತನೆ. ಮಾನವನು ನಿಂತಾಗ, ಕುಂತಾಗ, ಮಲಗಿ ದಾಗ, ಉಂಬಾಗ, ಉಡುವಾಗ, ಇಡುವಾಗ, ತೊಡುವಾಗ, ಭೋಗಿಸುವಾಗ, ವ್ಯವಹರಿಸುವಾಗ ಎಲ್ಲಾ ಕಾಲದಲ್ಲೂ ಸದಂಶ ವನ್ನೇ ನೆನೆಯುತ್ತಿರಬೇಕು. ಇದು ಆವನಿಗೆ ಉಸಿರಾಡುವಂತೆ ಅನಾಯಾಸವಾಗಿ ಲೀಲೆಯಿಂದ ನಡೆಯಬೇಕು. "ಶಿವೋಽಹಂ" "ಸದ್ರೂಪನಾದ ಶಿವನೇ ನಾನು" ಎಂಬ ಧ್ಯಾನವು ಮಾನವ ನಿಗೆ ಹೆಜ್ಜೆಹೆಜ್ಜೆಗೂ ನಡೆಯಬೇಕು. ಇದು ಸೋಽಹಂಜ್ಞಾನ ವೆನಿಸುತ್ತದೆ. ಮಾನವನ ಶಕ್ತಿವಿಕಾಸಕ್ಕೆ ಈ ಜ್ಞಾನವೇ ತಳ ಹದಿ. ಶಕ್ತಿವಿಕಾಸವೇ ಚಿದಾನಂದಾನುಭವ. ಇದೇ ಒಂದು ಭವ್ಯವೂ ದಿವ್ಯವೂ ಆದ ಮಂದಿರ. ಇದರ ನಿರ್ಮಾಣಕ್ಕೆ ಸೋಽಹಂಜ್ಞಾನವೇ ಸ್ಥಿರವಾದ ಅಸ್ತಿಭಾರವೆನಿಸಿದೆ.

ಹೀಗೆ ಮಾನವರೆಲ್ಲರೂ 'ಸೋಽಹಂ' ಎಂಬ ಮಂತ್ರವನ್ನು ಜಪಿಸುವ ಮೂಲಕ ತಾವು ಸದ್ರೂಪರೆಂಬುದನ್ನು ತಮ್ಮಲ್ಲಿಯೇ ನೆಲೆಗೊಳಿಸಿಕೊಳ್ಳಬೇಕು. ಇದರಿಂದ ಮಾನವರ ಭಯಶೋಕ ಮೋಹಗಳು ತೊಲಗಿ ಶಾಂತಿಸಮೃದ್ಧಿಗಳು ಲಭಿಸುತ್ತವೆ. ತಾನು ಸತ್ಯನೆಂಬುದು ತನ್ನಲ್ಲಿ ನೆಲೆಸಿದರೆ ಮಾನವನಿಗೆ ದೇಹವೇ

ತಾನೆಂಬ ಮಿಥ್ಯಾಜ್ಞಾನವೂ, ದೇಹವು ತನ್ನದೆಂಬ ಮಮತಾಭಿಮಾನವೂ ತೊಲಗುತ್ತವೆ. ಹೀಗೆ ಶಿವೋऽಹಂಭಾವದಲ್ಲಿ ನಿಂತವನು ಇಚ್ಛಾಶಕ್ತಿಯ ವಿಕಾಸದಿಂದ ವಿಶ್ವದಲ್ಲೆಲ್ಲಾ ತನ್ನ ಆತ್ಮೈಶ್ವರ್ಯವು ಅವ್ಯಾಜಪ್ರೇಮದಿಂದ ವ್ಯಾಪಿಸಿರುವುದೆಂದು ಭಾವಿಸುವನು. ಮಾನವನು ವಾಸ್ತವವಾಗಿ ದೇವನೇ ಆಗಿದ್ದರೂ ಮಾಯಾಸಂಬಂಧದಿಂದ ಮಾನವನಾಗಿದ್ದು ಇಚ್ಛಾಶಕ್ತಿಯ ಪೂರ್ಣವಿಕಾಸದಿಂದ ತನ್ನ ಸದ್ರೂಪದಲ್ಲಿ ಬಯಲಾಗುವನು. ಮಾನವನು ಸದ್ರೂಪದ ಧ್ಯಾನದಿಂದ ಸಾಧಿಸಿ ಅನುಭವಿಸಬೇಕಾದ ಅಖಂಡಾನಂದಸಾಮ್ರಾಜ್ಯವೇ ಇದು. ವಿಶ್ವದ ಜೀವರೆಲ್ಲರ ಹಿತವನ್ನು ಬಯಸುವ ವಿಶಾಲಬಯಕೆ ಎಂದರೆ ಇದೇಯೆ.

ಗೃಹಸ್ಥರು ಬಾಳಿನಲ್ಲಿ ಅನೇಕ ಬಗೆಯ ಕೊರತೆಗಳಿಂದ ನರಳುತ್ತಿರುವರು; ಮಾನ, ಅಭಿಮಾನ, ಅವಮಾನಗಳ ಸುಳಿಯಲ್ಲಿ ಸಿಲುಕಿ ಸಂಕಟಪಡುತ್ತಿರುವರು; ಪರಸ್ಪರವಾಗಿ ರಾಗದ್ವೇಷಗಳಿಂದಲೂ, ಸ್ತುತಿ ನಿಂದೆಗಳಿಂದಲೂ ಮತಿಗೆಟ್ಟು ತಮ್ಮ ಬಾಳಿನ ಗುರಿಯನ್ನೇ ಮರೆತಿರುವರು. "ತಾವು ಯಾರು? ಈ ಸಂಸಾರಕ್ಕೆ ಏಕೆ ಬಂದೆವು? ಇಲ್ಲಿ ಸಾಧಿಸಬೇಕಾದ್ದು ಏನು? ಹಿಂದೆ ಎಲ್ಲಿ ಇದ್ದೆವು? ಮುಂದೆ ಎಲ್ಲಿಗೆ ಹೋಗಬೇಕು? ಎಂದು ತಮ್ಮನ್ನು ತಾವು ವಿಚಾರಿಸಲಿಕ್ಕೂ ಅವರಿಗೆ ಸಾಧ್ಯವಿಲ್ಲ. ಸಂಸಾರವೆಂಬ ಸರ್ಪವು ಅವರನ್ನು ಪೂರ್ತಿಯಾಗಿ ನುಂಗಿಹಾಕಿದೆ. "ಹೆಂಗಸು ಬೆಳಿಗ್ಗೆ ಎದ್ದೊಡನೆ ಪಾನೀಯವನ್ನು ಸಿದ್ಧಪಡಿಸಿ ಕೊಡುವುದು, ಗಂಡಸು ಅದನ್ನು ಕುಡಿದು ಮತ್ತೆ ಭೋಗಕ್ಕೆ ಏನು ತರಬೇಕೆಂದು ಆಲೋಚಿಸುವುದು" ಇಷ್ಟೇ ಮಾನವಜೀವನವಾಗಿದೆ. ಗೃಹಸ್ಥನ ಬಾಳು ಈ ಮಟ್ಟಕ್ಕೆ ಇಳಿದುಹೋಗಿದೆ. ಕೇವಲ ಭೋಗವಷ್ಟೇ ಹೆಣ್ಣು ಗಂಡುಗಳ ಗಮನವನ್ನು ಪೂರ್ತಿ

ಯಾಗಿ ಸೆಳೆದಿದೆ. ಬೇರೆ ಯಾವ ವಿಚಾರಕ್ಕೂ ಸಂಸಾರದಲ್ಲಿ ಅವಕಾಶವೇ ಇಲ್ಲವಾಗಿದೆ. ಇಂತಹ ಗೃಹಸ್ಥರೇ ಅಸಂಖ್ಯಾತರಾಗಿ ಜಗತ್ತನ್ನಾವರಿಸಿರುವರು. ಅವರಿಗೆ ಸೋಽಹಂಜ್ಞಾನದ ಸವಿಯು ಕೊಂಚವಾದರೂ ಅಂಟಬೇಕು. ಭೋಗವೇ ಜೀವನದ ಗುರಿಯಲ್ಲವೆಂಬುದು ಅವರಿಗೆ ಮನವರಿಕೆಯಾಗಬೇಕು. "ಸೇವಾ ತ್ಯಾಗಗಳೇ ಬಾಳಿನ ಗುರಿ ಮತ್ತು ಸಿರಿ" ಎಂಬ ಅಂಶವನ್ನು ಅವರು ಗಮನಿಸಬೇಕು. ಉತ್ತಮವಾದ ಗುರಿ ಇಲ್ಲದ್ದರಿಂದ ಇವರ ಬಾಳು ಬಚ್ಚಲ ರೊಚ್ಚಿನಂತೆ ಹರಿಯುತ್ತಲಿದೆ. ಇದು ತೊಲಗಿ ಜೀವನವು ಗುರುವೆನಿಸಬೇಕಾದರೆ ಅವರು ಸಂಸಾರದಲ್ಲಿ ಸಾರವಾದ ವಸ್ತುವನ್ನು ಹಿಡಿಯಬೇಕು. ಇಂತಹ ವಸ್ತುವೇ ಈಶ್ವರ. ಆ ಈಶ್ವರನೇ ತಾನೆಂಬ ಜ್ಞಾನವು ಅವರಲ್ಲಿ ಅಳವಡಬೇಕು. ಹೆಣ್ಣು ಗಂಡುಗಳು ತಿಂದು ಉಂಡು ಮಲಗಿ ಭೋಗಿಸಿ ಸಾಯುವುದಕ್ಕಾಗಿ ಈ ದೇಹಕ್ಕೆ ಬಂದಿಲ್ಲ, ಆದರೆ ಈಶ್ವರನ ಚಿಂತನೆಯಿಂದ ಇಚ್ಛಾಶಕ್ತಿಯನ್ನು ವಿಕಾಸಗೊಳಿಸುವುದಕ್ಕಾಗಿ ಅವರು ಈ ದೇಹವನ್ನು ಪಡೆದಿರುವುದಾಗಿ ಭಾವಿಸಬೇಕು. ಹೀಗೆ ಪ್ರತಿಯೊಬ್ಬರೂ ಭಾವಿಸುವುದರಿಂದ ಅವರ ಆಧಿವ್ಯಾಧಿಗಳು ತೊಲಗಲಿರುವುವು. ಹಗುರವಾದ ಈ ಬಾಳು ಸೋಽಹಂಜ್ಞಾನದಿಂದಲೇ ಗುರುತರವಾಗುವುದು. ಇಂತಹ ಬಾಳಿನಿಂದಲೇ ಮಾನವನು ಧನ್ಯನೂ, ಪ್ರಸನ್ನನೂ, ಪ್ರಶಾಂತನೂ ಆಗುವನು. ಇದೇ ಲೇಸಿನ ಜೀವನ. ಇದನ್ನು ಕೊಂಚಕಾಲ ಬಾಳಿದರೂ ಸಾಕು. ನೂರು ವರ್ಷಗಳ ಆಡಂಬರದ ಜೀವನಕ್ಕಿಂತಲೂ ಒಂದೆರಡು ದಿವಸಗಳ ಗೌರವಜೀವನವೇ ಶ್ರೇಯಸ್ಕರ. ಇಷ್ಟೆಲ್ಲಾ ಶ್ರೇಯೋಭ್ಯುದಯಗಳು ಮಾನವನಿಗೆ ಇಚ್ಛಾಶಕ್ತಿಯ ವಿಕಾಸದಿಂದ ಲಭಿಸಲಿವೆ.

## ಜ್ಞಾನಶಕ್ತಿಯ ವಿಕಾಸ

ಮಾನವನು ಸತ್ಯಸ್ವರೂಪದ ನೆನಹಿನಿಂದ ತನ್ನ ಇಚ್ಛಾಶಕ್ತಿಯನ್ನು ವಿಕಾಸಗೊಳಿಸಿ ನೆಮ್ಮದಿಯಿಂದ ಬಾಳುವಂತೆ ಚಿತ್ಸ್ವರೂಪದ ನೆನಹಿನಿಂದ ತನ್ನ ಜ್ಞಾನಶಕ್ತಿಯನ್ನು ವಿಕಾಸಗೊಳಿಸಿಕೊಳ್ಳಬೇಕು. ಇಚ್ಛಾಶಕ್ತಿಯ ವಿಕಾಸದಿಂದ ಮಾನವನಿಗೆ ಕಷ್ಟನಷ್ಟಗಳೂ, ರೋಗರುಜಿನಗಳೂ ಆನಂದಮಯವಾಗಿಯೇ ಕಾಣುವಂತೆ ಜ್ಞಾನಶಕ್ತಿಯ ವಿಕಾಸದಿಂದ ಮಾನವನು ತನ್ನ ಸುತ್ತಲೂ ಇರುವ ಜೀವರೆಲ್ಲರನ್ನೂ ತನ್ನಂತೆ ಆನಂದಮಯರನ್ನಾಗಿಯೇ ಭಾವಿಸುವನು. ಆಗ ಇವನಿಗೆ ಲೋಕದಲ್ಲಿ ಶತ್ರುವೇ ಇಲ್ಲವೆಂಬ ಭಾವನೆ ದೃಢಪಡುವುದು. ಎಲ್ಲರನ್ನೂ ಆತ್ಮೀಯತೆಯಿಂದ ಕಾಣುವ ವಿಶಾಲಮನೋಭಾವವೇ ಜ್ಞಾನಶಕ್ತಿಯ ಶುಭಲಕ್ಷಣ. ಇದರಿಂದ ಎಲ್ಲ ಜೀವರನ್ನೂ ತನ್ನ ಆಧ್ಯಾತ್ಮಬಂಧುಗಳೆಂದು ಕಾಣುವ ಸರ್ವಾತ್ಮಭಾವದಲ್ಲಿ ಮಾನವನು ನೆಲೆಯಾಗಿ ನಿಲ್ಲುವನು. ಜ್ಞಾನಶಕ್ತಿಯ ವಿಕಾಸದಿಂದ ಮಾನವನು ಬಾಳಿನಲ್ಲಿ ಅಳವಡಿಸಿಕೊಳ್ಳುವ ದಿವ್ಯದೃಷ್ಟಿ ಎಂದರೆ ಇದೇಯೆ. ಇಂತಹ ದಿವ್ಯದೃಷ್ಟಿಯನ್ನು ಸಾಧಕರೆಲ್ಲರಿಗೂ ದೊರಕಿಸುವ ದಿವ್ಯಸಾಧನವೇ ಜ್ಞಾನಶಕ್ತಿಯ ವಿಕಾಸ. ಇದನ್ನು ಎಲ್ಲರೂ ಪಡೆಯಬಹುದು. "ಇದು ಇಂತವರಿಗೇ ಮೀಸಲಾಗಿದೆ; ಅಂತವರಿಗೆ ದಕ್ಕುವುದಿಲ್ಲ" ಎಂಬ ಸಂಕೋಚವೇ ಜ್ಞಾನಶಕ್ತಿಗೆ ಹೊಂದಿಕೆಯಾಗುವುದಿಲ್ಲ. ಜ್ಞಾನಶಕ್ತಿಗಿಂತ ಮಿಗಿಲಾದ ಪಾವನವಸ್ತುವೇ ಜಗತ್ತಿನಲ್ಲಿಲ್ಲ. ಇದು ಪಂಡಿತರಿಗೂ, ಪಾಮರರಿಗೂ, ಸ್ತ್ರೀಯರಿಗೂ, ಬಾಲಕರಿಗೂ ಸಮಾನವಾಗಿ ಅನ್ವಯಿಸುವ ದಿವ್ಯಸಾಧನ.

ಇದನ್ನು ಮಾನವನು ಪಡೆಯುವುದು ಹೇಗೆ? ಸದ್ವಸ್ತುವಿನ ಧ್ಯಾನದಿಂದ ಮಾನವನ ಸತ್ತ್ವಗುಣವು ಸದ್ರೂಪವೇ ಆಗುವಂತೆ

ಚಿದ್ವಸ್ತುವಿನ ಸೆಸಹಿನಿಂದ ಮಾನವನ ರಜೋಗುಣವು ಚಿದ್ರೂಪ ವಾಗಿ ಪರಿಣಮಿಸುತ್ತದೆ. ಇದು ವೈಯಕ್ತಿಕಭಾವನೆಯನ್ನು ತೊಲಗಿಸಿ ತಾತ್ತ್ವಿಕಭಾವನೆಯನ್ನು ಹುಟ್ಟಿಸುತ್ತದೆ. ಹೀಗೆ ತಾನು ಒಬ್ಬ ವ್ಯಕ್ತಿ ಎಂಬ ವ್ಯಾಮೋಹದೃಷ್ಟಿಯನ್ನು ಮಾನ ವನು ತೊಲಗಿಸಿಕೊಂಡು ತಾನು ವಿಶಾಲವೂ ಅಖಂಡವೂ ಆದ ವಿಶ್ವಾತ್ಮನೆಂಬ ದಿವ್ಯಜ್ಞಾನವನ್ನು ಈ ಜೀವನದಲ್ಲಿ ದೇಹೇಂದ್ರಿಯ ಗಳ ಸಹಕಾರದಿಂದಲೇ ಪಡೆಯಬೇಕು. ಇದನ್ನು "ತತ್ತ್ವ ಭಾವಾತ್" ಎಂಬಲ್ಲಿ ಶ್ರುತಿಯು ಬೋಧಿಸುತ್ತಲಿದೆ. ಯಾವನು ಚಿದ್ರೂಪವೇ ತಾನೆಂಬ ಭಾವದಲ್ಲಿ ನಿಲ್ಲುವನೋ ಅವನಲ್ಲಿ ಜ್ಞಾನ ಶಕ್ತಿಯ ವಿಕಾಸವುಂಟಾಗುವುದು. ಇದರಿಂದಲೇ ಮಾನವನಿಗೆ ಸುಖದುಃಖಗಳು, ಸ್ತುತಿನಿಂದೆಗಳು ಇವೇ ಮೊದಲಾದ ದ್ವಂದ್ವ ಗಳು ಸಮಭಾವನೆಯಿಂದ ಸುಖಮಯವೇ ಆಗತೊಡಗುವುವು. ಜ್ಞಾನಶಕ್ತಿಯೇ ಭಿನ್ನಭಿನ್ನಸ್ವಭಾವದ ಜನರಲ್ಲಿ ಭಾವೈಕ್ಯತೆ ಯನ್ನು ದೊರಕಿಸುವ ದಿವ್ಯಸಾಧನ. ಅರವಿಂದಘೋಷ್, ತಿಲಕ್ ಮೊದಲಾದ ದಾರ್ಶನಿಕರು ಮಾನವರಿಗೆ ಇಚ್ಛಾಜ್ಞಾನಕ್ರಿಯಾ ಶಕ್ತಿಗಳ ಪೂರ್ಣವಿಕಾಸವನ್ನೇ ಬಾಳಿನ ಗುರಿ ಎಂದು ಸ್ಪಷ್ಟವಾಗಿ ನಿರ್ದೇಶಿಸಿದ್ದಾರೆ. ಸಣ್ಣ ಬಯಕೆಯಿಂದಲೂ, ಸಣ್ಣ ವಿವೇಚನೆ ಯಿಂದಲೂ ಮಾನವರು ಸಣ್ಣವರಾಗುವರೇ ಹೊರತು ದೊಡ್ಡವ ರಾಗುವಂತಿಲ್ಲ. ಸಣ್ಣವರಾದಂತೆಲ್ಲ ದುಃಖದ ಕೋಟಲೆ ಹೆಚ್ಚು ವುದೇ ಹೊರತು ನಿತ್ಯಸುಖದ ವಾಸನೆಯೇ ಅಂಟುವುದಿಲ್ಲ. ಮಾನವರು ಸಣ್ಣವರಾಗುವುದರಿಂದ ಆತ್ಮಹನನದ ಮತ್ತು ರಾಷ್ಟ್ರ ದ್ರೋಹದ ದೋಷ ಅಂಟುವುದು. ಇಂತಹ ಸ್ವಯಂಕೃತಾಪ ರಾಧಿಗೆ ಪಾಪವಿಮೋಚನೆಗೆ ಅವಕಾಶವೇ ಲಭಿಸಲಾರದು.

ಜ್ಞಾನಶಕ್ತಿಯ ವಿಕಾಸದಿಂದ ಮಾನವನು ಅಜ್ಞಾನ, ಅಶ್ರದ್ಧೆ,

ಸಂದೇಹಗಳನ್ನು ದೂರಮಾಡುವನು. ಹಾಗೆಯೇ ಅತ್ಯಾಚಾರ, ಅನಾಚಾರ, ದುರಾಚಾರಗಳನ್ನು ಖಂಡಿಸಲು ಶಕ್ತನಾಗುವನು; ಅದರಂತೆಯೇ ಅಂಧಶ್ರದ್ಧೆ, ಅವಿವೇಕವರ್ತನೆ, ದುರಭಿಮಾನಸ್ಥಿತಿ ಇವಕ್ಕೆ ಸಿಲುಕದೆ ಆರ್ಜವಪ್ರಕೃತಿಯನ್ನು ಜೀವನದಲ್ಲಿ ಅಳವಡಿಸಿ ಕೊಳ್ಳುವನು. ಮಾನವನನ್ನು ನಿರಾಕಾರಸ್ಥಿತಿಯಲ್ಲಿ ನೆಲೆಗೊಳಿಸಿ ಸಾಕಾರದ ವ್ಯಾಮೋಹವನ್ನು ತೊಲಗಿಸುವ ದಿವ್ಯಾಸ್ತ್ರವೆಂದರೆ ಜ್ಞಾನಶಕ್ತಿಯ ವಿಕಾಸವಲ್ಲದೆ ಬೇರೆಯಲ್ಲ. ಸಂಸಾರದ ಜಂಜಾಟದಲ್ಲಿ ನರಳುತ್ತಿರುವ ಗೃಹಸ್ಥರಿಗೆ ಪರಮಾತ್ಮನ ಉದಾರಾಶ್ರಯವನ್ನು ದೊರಕಿಸಿ ಅವರ ನಿರಾಶೆ, ಜುಗುಪ್ಸೆ, ವೈಮನಸ್ಯ ಮತ್ತು ಅತೃಪ್ತಿಗಳನ್ನು ನಿರ್ದಾಕ್ಷಿಣ್ಯವಾಗಿ ಛೇದಿಸಲು ತೀಕ್ಷ್ಣವೂ ಸೂಕ್ಷ್ಮವೂ ಆದ ಶಸ್ತ್ರವೆಂದರೆ ಜ್ಞಾನಶಕ್ತಿಯೇ. ಈ ಬಗೆಯ ಶಕ್ತಿಯನ್ನು ಬಾಳಿನಲ್ಲಿ ಸಾಧಿಸಿಕೊಂಡವನು ಅನ್ಯಾಯ, ಅನೀತಿ, ಅಸತ್ಯಗಳ ದುರ್ಮಾರ್ಗಕ್ಕೆ ಬೀಳದೆ ಯಾವಾಗಲೂ ಎಚ್ಚರಿಕೆಯಿಂದ ಬಾಳುವನು. ಅವನಿಗೆ ಜಗತ್ತೆಲ್ಲವೂ ಬ್ರಹ್ಮಮಯವೇ ಆಗಿ ಕಾಣುವುದರಿಂದ ಇಲ್ಲಿ ದುಃಖವ್ಯಸನಮೋಹಗಳೇ ಅವನ ಗಮನಕ್ಕೆ ಬರುವಂತಿಲ್ಲ. ಇಂತವನೇ ನಿತ್ಯಾನಂದವನ್ನು ಅನುಭವಿಸುತ್ತ ಚಿದಾಕಾಶದಲ್ಲಿ ರಮಿಸಲು ಶಕ್ತನಾಗುವನು. ಜ್ಞಾನಶಕ್ತಿಯ ವಿಕಾಸದಿಂದ ಮಾನವನು ಸಾಧಿಸುವ ಪರಮೈಶ್ವರ್ಯವೆಂದರೆ ಇದೇಯೇ. ಇಂತವನಿಗೆ ಲೋಕದಲ್ಲಿ ದುರ್ಭಿಕ್ಷದಾರಿದ್ರ್ಯಗಳ ಸುಳಿವೇ ಕಾಣುವುದಿಲ್ಲ. ಹೀಗೆ ಮಾನವರೆಲ್ಲರೂ ಉತ್ತಮ ಸಾಧಕರೆನಿಸಿ ಚಿದ್ರೂಪವನ್ನು ನಿರಂತರವೂ ನೆನೆಯುತ್ತ ಆತ್ಮೌಪಮ್ಯದೃಷ್ಟಿಯನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದೇ ಜ್ಞಾನಶಕ್ತಿಯ ವಿಕಾಸದಿಂದ ಆಗಬೇಕಾದ ಗುರುತರವಾದ ಕಾರ್ಯ.

## ಮಾನವನಿಗೆ ಶಕ್ತಿವಿಕಾಸದ ಪರಿಣಾಮ

ಮನುಷ್ಯನಿಗೆ ಆತ್ಮಶಕ್ತಿಯು ವಿಕಾಸದಿಂದ ಆಧ್ಯಾತ್ಮ ತೇಜಸ್ಸು ಹೆಚ್ಚಿ ವಿಶ್ವದ ಮಾನವರೆಲ್ಲರೂ ತನ್ನ ಸೋದರ ಸೋದರಿಯರೆಂಬ ವಿಶಾಲವಾದ ಭಾವನೆಯುಂಟಾಗಿ ಆದರಿಂದ ಅವನ ಇಚ್ಛಾಶಕ್ತಿಯು ವಿಕಾಸಗೊಳ್ಳುವುದೆಂದು ಹಿಂದೆ ತಿಳಿಸಿಯಾಗಿದೆ. ಅದರಂತೆಯೇ ಅವನ ಮನಶ್ಶಕ್ತಿಯ ವಿಕಾಸದಿಂದ ಅವನಲ್ಲಿ ವಿಶಾಲಮನೋಭಾವವು ಬೆಳೆದು ವಿಶ್ವವೆಲ್ಲವನ್ನೂ ತನ್ನ ಆತ್ಮೀಯ ಬಂಧುಭಗಿನಿಯರೆಂದು ಪ್ರೀತಿಸುವಷ್ಟು ವಿಶಾಲವಾಗಿ ಅವನ ಜ್ಞಾನಶಕ್ತಿಯು ವಿಕಾಸಗೊಳ್ಳುವುದೆಂದೂ ಹಿಂದೆ ತಿಳಿಸಲಾಗಿದೆ. ಇಚ್ಛಾಶಕ್ತಿಯು ಸ್ವಾರ್ಥತೆಯ ಕಿಲುಬಿನಿಂದ ಪಾರಾಗಿ ಅಖಂಡಜಗತ್ತಿನ ಜನತೆಯ ಹಿತವನ್ನು ನಿಷ್ಪಕ್ಷಪಾತ ದೃಷ್ಟಿಯಿಂದ ಬಯಸುವಷ್ಟು ವಿಶಾಲವೂ ವ್ಯಾಪಕವೂ ಆಗುತ್ತದೆ. ಹೀಗೆ ವಿಕಾಸಗೊಂಡ ಮಾನವನಿಗೆ "ಇವನು ತನ್ನವನು, ಅವನು ಅನ್ಯನು, ಇವನು ದಕ್ಷಿಣದೇಶದವನು, ಅವನು ಉತ್ತರ ದೇಶದವನು, ಇವನು ಉತ್ತಮಕುಲದವನು, ಅವನು ನೀಚಕುಲದವನು" ಎಂಬ ಭೇದಭಾವನೆಯೂ, ಸಂಕುಚಿತವರ್ತನೆಯೂ ಸಹಜವಾಗಿ ತೊಲಗುತ್ತವೆ. ಅವನ ದೃಷ್ಟಿ ವಿಶ್ವಪ್ರೇಮ ಮತ್ತು ಸರ್ವಾತ್ಮಭಾವಗಳಿಂದ ಕಂಗೊಳಿಸುತ್ತಲಿರುವುದು. "ಉದಾರ ಚರಿತಾಂ ತು ವಸುಧೈವ ಕುಟುಂಬಕಂ" ಎಂದು ಭವಭೂತಿ ಮಹಾಕವಿಯು ಹೇಳಿರುವಂತೆ ಇಚ್ಛಾಶಕ್ತಿಯ ಉದಾರಸ್ವಭಾವದಲ್ಲಿ ಮಾನವನು ವಿಶ್ವದ ಜನರೆಲ್ಲರನ್ನೂ ತನ್ನವರೆಂದೂ, ಎಲ್ಲರಲ್ಲೂ ತಾನೇ ಇರುವೆನೆಂದೂ ಭಾವಿಸುವಷ್ಟು ಉನ್ನತಮಟ್ಟದ ವಿಶ್ವಕುಟುಂಬಿ ಎನಿಸುವನು. ಭಾರತವು ಮೊದಲಿಂದಲೂ ಹೀಗೆ ವಿಶ್ವಕುಟುಂಬಿ ಎನಿಸಿರುವುದು ನಮ್ಮೆಲ್ಲರ ಸೌಭಾಗ್ಯವೆನಿಸಿದೆ.

ವಿಶ್ವದ ಹಿತವನ್ನು ನೇರವಾಗಿ ಬಯಸುವ ವ್ಯಾಸ ವಾಲ್ಮೀಕಿ ಮಹರ್ಷಿಗಳು "ಪರೋಪಕಾರಃ ಪುಣ್ಯಾಯ ಪಾಪಾಯ ಪರ ಪೀಡನಂ" ಎಂದು ಎಷ್ಟು ಉದಾರಭಾವದಿಂದ ಪ್ರತಿಯೊಬ್ಬ ಮಾನವನಿಗೂ ಉತ್ತಮವುಟ್ಟದ ದಿವ್ಯ ಆದರ್ಶವನ್ನು ಅನುಗ್ರಹಿ ಸಿರುವರೆಂಬುದೇ ಇಚ್ಛಾಶಕ್ತಿಯ ವಿಕಾಸಕ್ಕೆ ಸ್ಪಷ್ಟವಾದ ನಿದರ್ಶನವಾಗಿದೆ. ಪ್ರತಿಯೊಬ್ಬ ವ್ಯಕ್ತಿಯೂ ಹೆಣ್ಣಾಗಲೀ ಗಂಡಾಗಲೀ ತನ್ನಂತೆ ಇತರರನ್ನು ಗೌರವಿಸಿ ಪ್ರೀತಿಸುವ ಸದವ ಕಾಶಕ್ಕಾಗಿ ಹಾತುವರೆಯಬೇಕು. ಯಾರೊಬ್ಬರಿಗೂ ನೋವನ್ನು ಕೊಡುವ ಸನ್ನಿವೇಶವನ್ನೇ ಯಾವನೂ ಎಂದೆಂದಿಗೂ ಬಯಸ ಬಾರದು.

"ಸರ್ವೇ ಜನಾಸ್ಸುಖಿನೋ ಭವಂತು
ಮಾ ಕಶ್ಚಿದ್ದುಃಖಭಾಗ್ಭವೇತ್"

"ಎಲ್ಲರಿಗೂ ಸುಖಶಾಂತಿಗಳು ಲಭಿಸಲಿ, ಎಲ್ಲರೂ ಆರೋಗ್ಯ ದೃಢಕಾಯರಾಗಿ ಬಾಳಲಿ, ಯಾರಿಗೂ ರೋಗರುಜಿನಗಳು ಬಾರ ದಿರಲಿ. ಪೃಥಿವಿಯಲ್ಲಿ ಶಾಂತಿ ನೆಲಸಲಿ. ನೀರು ನೆಮ್ಮದಿಯಿಂದ ಎಲ್ಲಾ ಕಡೆಯಲ್ಲೂ ಹರಿದು ಲೋಕಕಲ್ಯಾಣವನ್ನು ಸಾಧಿಸಲಿ. ಬೆಂಕಿ ಎಲ್ಲರಿಗೂ ಶಾಖವನ್ನು ಕೊಟ್ಟು ಶೈತ್ಯವನ್ನು ಪರಿಹರಿಸಲಿ, ಗಾಳಿ ಎಲ್ಲರಿಗೂ ಸಮಾಧಾನವನ್ನುಂಟುಮಾಡಲಿ, ಬಯಲು ಎಲ್ಲರಿಗೂ ಆಶ್ರಯವಾಗಲಿ, ಎಲ್ಲೆಲ್ಲಿಯೂ ಶಾಂತಿ ತೃಪ್ತಿಗಳು ನೆಲಸಲಿ." ಎಂಬ ವಿಶಾಲವಾದ ಬಯಕೆ ಭಾರತೀಯನ ದೈನಂದಿನಪ್ರಾರ್ಥನೆಯಾಗಿದೆ. ಇದು ನೈಜವಾದ ಇಚ್ಛಾ ಶಕ್ತಿಯ ಪೂರ್ಣವಿಕಾಸ. ಇದರ ಬೆಳಕಿನಲ್ಲಿ ವ್ಯವಹರಿಸುವುದೇ ಜಾಣತನ. ಇಂತಹ ಜಾಣನಿಗೆ ವಿಶ್ವವೆಲ್ಲವೂ ಒಂದೇ ಮನೆತನ ವಾಗಿ ಪರಿಣಮಿಸುತ್ತದೆ. ಇವನಿಗೆ ಸಣ್ಣ ಭಾವನೆ, ಸಣ್ಣ ಆಲೋ

ಚಸ್ಸೆ, ಸಣ್ಣ ಬಯಕೆ ಇಂತವು ಎಂದೆಂದಿಗೂ ಸುಳಿಯಲಾರವು. ಇದರಲ್ಲಿಯೇ ಮಾನವನ ಹಿರಿಮೆ ಅಡಗಿದೆ. ಇದು ಅವನಿಗೆ ರಕ್ತದಲ್ಲಿ ಹಾಸುಹೊಕ್ಕಾಗಿ ಹೊಂದಿಕೆಯಾಗಬೇಕು. ಇದುವೆ ಭಾರತೀಯ ಸಂಸ್ಕೃತಿ. ಇದನ್ನು ನಮ್ಮ ಯುವಯುವತಿಯರು ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಇದು ಅವರ ಸ್ವಭಾವವಾಗಿ ಪರಿಣಮಿಸಬೇಕು. ವಿಶ್ವವಿದ್ಯಾನಿಲಯದಲ್ಲಿ ಅವರು ಗಳಿಸುವ ಆಧ್ಯಾತ್ಮತೇಜಸ್ಸೆಂದರೆ ಇಂತಹದು. ಇದನ್ನು ಪಡೆದವನಿಗೆ ಯಾರೊಬ್ಬರಲ್ಲಿಯೂ ಪರಕೀಯಭಾವನೆಯೇ ಸುಳಿಯುವಂತಿಲ್ಲ.

ಸಂಸಾರದಲ್ಲಿ ಅದಿಲ್ಲ ಇದಿಲ್ಲವೆಂಬ ಕೊರತೆಯಲ್ಲಿ ಕರಗದೆ ಇದ್ದಷ್ಟರಲ್ಲಿ ತೃಪ್ತಿಹೊಂದಿ ಪರಹಿತವನ್ನು ನಿರ್ವಂಚನೆಯಿಂದ ಬಯಸುವ ಯುವಯುವತಿಯರೇ ಧನ್ಯರು. ದೇಶಸೇವೆಯೇ ಈಶ್ವರನ ಸೇವೆ ಎಂಬ ಸದ್ಭಾವನೆಯನ್ನು ಹುಟ್ಟಿಸಿ ಮಾನವನನ್ನು ಪಾವನಗೊಳಿಸುವ ದಿವ್ಯಸಂಜೀವಿನಿಯೇ ಇಚ್ಛಾಶಕ್ತಿಯ ವಿಕಾಸ. ಮಾನವರೆಲ್ಲರಿಗೂ ಪ್ರಧಾನವಾದ ಅಲಂಕಾರವೆಂದರೆ ಇದೇಯೆ ಸ್ತ್ರೀಪುರುಷರನ್ನು ಸುಂದರಗೊಳಿಸುವ ದಿವ್ಯಾಲಂಕಾರವೇ ಇದು. ಒಡವೆವಸ್ತ್ರಗಳು ನಮ್ಮ ಯುವಯುವತಿಯರನ್ನು ಅಲಂಕಾರಿಸಲಾರವು. ಲೇಪನವು ಅವರಿಗೆ ಸುವಾಸನೆಯನ್ನೆಂದಿಗೂ ಮಾಡಲಾರದು. ಪುಷ್ಪಹಾರವು ಮುಡಿಯನ್ನು ಅಲಂಕರಿಸಲಾರದು; ಆದರೆ ನಿಜವಾದ ಅಲಂಕಾರ ಇಚ್ಛಾಶಕ್ತಿಯ ವಿಕಾಸದಲ್ಲಿ ಅಡಗಿದೆ. ತನ್ನಲ್ಲಿಗೆ ಬಂದವರನ್ನು ಆದರಿಸಿ ಗೌರವಿಸಿ ಸಂತೋಷಪಡಿಸುವ ಸದಿಚ್ಛೆಯೇ ಮಾನವರೆಲ್ಲರ ಆಧ್ಯಾತ್ಮಸಂಪತ್ಸೌಭಾಗ್ಯ. ತಾನಿರುವಕಡೆಯೇ ತನ್ನ ಸೋದರ ಸೋದರಿಯರೆಲ್ಲರ ಶ್ರೇಯೋಽಭ್ಯುದಯಗಳನ್ನು ಬಯಸುವಷ್ಟು

ಆತ್ಮಶ್ರೀಯು ಪ್ರತಿಯೊಬ್ಬನಿಗೂ ವಿಕಾಸಗೊಳ್ಳಲಿ. ಇದನ್ನು ಪಡೆಯದೆ ಇರುವವನ ವಿದ್ಯೆ ಶೋಭಿಸುವುದಿಲ್ಲ. ಇದನ್ನು ಸಮುಚಿತವಾಗಿ ನಿತ್ಯವೂ ಆಚರಿಸದವನ ಭೋಗ ಹೆಣದ ಶೃಂಗಾರವಲ್ಲದೆ ಬೇರೆಯಲ್ಲ. ಹೀಗೆ ಸಕಲಸೌಭಾಗ್ಯಗಳ ಮೂಲವೆನಿಸಿದ ಇಚ್ಛಾಶಕ್ತಿಯನ್ನು ನಮ್ಮ ಯುವಯುವತಿಯರೆಲ್ಲರೂ ಜೀವನದಲ್ಲಿ ರೂಢಿಸಿಕೊಳ್ಳಲೆಂದು ಆಶಿಸಲು ಸಂತೋಷವಾಗುತ್ತದೆ.

ಹೀಗೆ ಇಚ್ಛಾಶಕ್ತಿಯ ವಿಕಾಸದಿಂದ ಜನ್ಮವನ್ನು ಪಾವನಗೊಳಿಸಿ, ಜೀವನವನ್ನು ಅಲಂಕರಿಸಿಕೊಂಡ ಮಾನವನಲ್ಲಿ ಸಹಜವಾಗಿ ಜ್ಞಾನಶಕ್ತಿಯು ವಿಕಾಸಗೊಳ್ಳುವುದು. ಆಗ ಅವನು ತನ್ನ ಸುತ್ತಲೂ ಇರುವ ಜನರೆಲ್ಲರಲ್ಲೂ ಲೋಪದೋಷಗಳನ್ನು ಹುಡುಕುವ ಗೋಜಿಗೆ ಹೋಗದೆ ಅವರ ಗುಣಗಳನ್ನು ಮಾತ್ರವೇ ಗ್ರಹಿಸುವಷ್ಟು ಮನೋವೈಶಾಲ್ಯವನ್ನು ಪಡೆಯುವನು. ಇದು ಮಾನವನ ಹೆಚ್ಚಿನ ಪ್ರಗತಿಯನ್ನು ವ್ಯಕ್ತಪಡಿಸುತ್ತದೆ. ಇಚ್ಛಾಶಕ್ತಿವಿಕಾಸವೆಂಬ ಸುಂದರವಾದ ಅರಮನೆಗೆ ಜ್ಞಾನಶಕ್ತಿವಿಕಾಸವು ಭಂಗಾರದ ಕಲಶವೆನಿಸುವುದು. ಈ ಬಗೆಯ ವಿಕಾಸವನ್ನು ಜೀವನದಲ್ಲಿ ಅಳವಡಿಸಿಕೊಂಡವನು ನಿಜವಾಗಿಯೂ ವಿಶ್ವಪ್ರೇಮಿ ಎನಿಸುವನು ಇಂತಹ ಜ್ಞಾನಯೋಗಿಯ ದರ್ಶನವು ಮಾನವರ ಜನ್ಮಾಂತರದ ಪಾಪಲೋಪಗಳನ್ನು ಪರಿಹರಿಸಿ ಅವರನ್ನು ಪುಣ್ಯಾತ್ಮರನ್ನಾಗಿ ಮಾಡುವುದು. ಇವನ ದೃಷ್ಟಿಯಲ್ಲಿ ಮಾನವರೆಲ್ಲರೂ ವಿಕಾಸವನ್ನು ಹೊಂದಲು ಯೋಗ್ಯರೆನಿಸುವರು. "ಮಾನವರಲ್ಲಿ ಯಾರೊಬ್ಬರೂ ವಿಕಾಸಕ್ಕೆ ಅಯೋಗ್ಯರಲ್ಲ" ವೆಂಬ ವಿಶಾಲಮನೋಭಾವದ ಹೊಂಬೆಳಕಿನಲ್ಲಿ ವ್ಯವಹರಿಸುವ ಜಾಣತನವನ್ನು ಮಾನವನು ಜ್ಞಾನಶಕ್ತಿಯ ವಿಕಾಸದಿಂದ ಪಡೆಯಲಿರುವನು. ಇದನ್ನು ನಮ್ಮ ಯುವಯುವತಿಯರು

ಜೀವನದಲ್ಲಿ ಎಷ್ಟು ಬೇಗ ಅಳವಡಿಸಿಕೊಳ್ಳುವರೋ ಅಷ್ಟು ಬೇಗನೆ ಅವರ ಕಲ್ಯಾಣವು ಸಾಧನೆಯಾಗಲಿದೆ. ಸ್ತ್ರೀಯರಲ್ಲಿ ಕೆಲವು ವಿಧವೆಯರು ಜೀವನದಲ್ಲಿ ನಿರಾಶರಾಗಿ ವ್ಯಥೆಪಡುತ್ತಿರುವರು. ಅಂತವರು ಇಚ್ಛಾಜ್ಞಾನಶಕ್ತಿಗಳ ವಿಕಾಸದಿಂದ ತಮ್ಮನ್ನು ಅಲಂಕರಿಸಿಕೊಂಡು ಉತ್ಸಾಹದಿಂದ ಜಾಗೃತರಾಗುವುದು ಮೇಲು. ಹೆಣ್ಣಾಗಲೀ ಗಂಡಾಗಲೀ ಮುದುಕನಾಗಲೀ ಯುವಕನಾಗಲೀ, ಬೇರೆಯವರನ್ನು ನಿಂದಿಸಲಿಕ್ಕಾಗಲೀ ಇತರರ ಸುಖಸಂಪತ್ತುಗಳನ್ನು ನೋಡಿ ಕೊರಗಲಿಕ್ಕಾಗಲೀ ಹುಟ್ಟಿಲ್ಲ. ಎಲ್ಲರನ್ನೂ ಪ್ರೀತಿಸಲಿಕ್ಕೂ ಬೇರೆಯವರ ಸೌಭಾಗ್ಯವನ್ನು ನೋಡಿ ಸಂತೋಷಪಡಲಿಕ್ಕೂ ಪ್ರತಿಯೊಬ್ಬರೂ ಹುಟ್ಟಿರುವರು. ಇದು ಎಲ್ಲರ ಸ್ಮೃತಿಪಥದಲ್ಲಿ ಸ್ಥಿರವಾಗಿ ನೆಲಸಬೇಕು. ಅಂತವರಿಗೆ ದುರ್ಮಾರ್ಗದಲ್ಲಿಯೇ ಮನಸ್ಸು ಪ್ರವರ್ತಿಸುವುದಿಲ್ಲ. ಇದು ನೈಜವಾದ ಜ್ಞಾನಶಕ್ತಿಯ ವಿಕಾಸ. ಕೆಲವರು ಮಾನಸಿಕದೌರ್ಬಲ್ಯದಿಂದ ರೂಪವ್ಯಾಮೋಹಕ್ಕೆ ಬಲಿಯಾಗಿ ಅತ್ಯಾಚಾರಗಳನ್ನು ನಡೆಸುವರು. ಅಂತವರು ಮೋಹಪಾಶದಲ್ಲಿ ಸಿಲುಕಿ ಅದರಿಂದ ಪಾರಾಗುವ ಮಾರ್ಗವನ್ನೇ ಕಾಣದೆ ನರಳುವರು. ಆದರೂ ಅವರು ಆಧ್ಯಾತ್ಮಶಕ್ತಿಯನ್ನೂ, ಮಾನಸಿಕಶಕ್ತಿಯನ್ನೂ ಹೆಚ್ಚಿಸಿಕೊಂಡರೆ ಅವರ ಮೋಹಪಾಶವೇ ಪ್ರೇಮಸಂಬಂಧವಾಗಿ ಪರಿಣಮಿಸಬಲ್ಲದು. ಯಾವನು ಯಾವ ವ್ಯಕ್ತಿಯ ಬಾಹ್ಯ ಸೌಂದರ್ಯಕ್ಕೆ ಮೋಹಗೊಂಡಿರುವನೋ ಅವನು ತನ್ನ ಸಚ್ಚಿದ್ರೂಪವನ್ನು ನಿತ್ಯವೂ ಸ್ಮರಿಸಿಕೊಂಡರೆ ಅವನಲ್ಲಿ ಮೋಹದೃಷ್ಟಿಯು ತೊಲಗಿ ಶುದ್ಧಸಾತ್ವಿಕಪ್ರೇಮವಾಗಿ ಪರಿಣಮಿಸುತ್ತದೆ. ಯಾವನು ತನ್ನ ಸಚ್ಚಿದ್ರೂಪವನ್ನು ಅರಿಯುವನೋ ಅವನು ತನ್ನ ಮೋಹಕ್ಕೆ ಪಾತ್ರರಾಗಿದ್ದವರಲ್ಲೂ ಅದನ್ನೇ ಕಂಡು

ಅನುಭವಿಸುವನು. ಆಗ ಇಬ್ಬರೂ ಶುದ್ಧರಾಗಿ ಅವರ ಮೋಹ ಪಾಶವು ತ್ಯಾಗಮಯವಾದ ಪ್ರೇಮವಾಗಿ ಪರಿಣಮಿಸುತ್ತದೆ. ಮಾನವನಿಗೆ ಅರಿವು ಮರಹು ನೆನಹು ಈ ಮೂರರ ಮೇಲೆಯೂ ಅಧಿಕಾರವಿಲ್ಲ. ಇವು ಮೂರೂ ಪರಮಾತ್ಮನ ಇಚ್ಛೆಯಂತೆಯೇ ನಡೆಯುತ್ತವೆ. ಇದನ್ನು "ಮತ್ತಃ ಸ್ಮೃತಿಜ್ಞಾನಮಪೋಹನಂ ಚ" ಎಂದು ಪರಮಾತ್ಮನು ಗೀತೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ. ಇದರಮೇಲೆ ಒಳ್ಳೆಯದು ಕೆಟ್ಟದ್ದು, ಸುಖದುಃಖ, ಕತ್ತಲೆ ಬೆಳಕು ಎಲ್ಲವೂ ಅವನ ಪರಿಣಾಮವೇ ಆಗಿವೆ.

"ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ" ಅವನ ಈ ಮಾತಿನಿಂದ ನಿರ್ಗತಿಕರು ನಿರಾಶರು, ನಿರಾಶ್ರಿತರು, ಪಾಪಿಗಳು ಇಂತವರೆಲ್ಲರೂ ಸಮಾಧಾನಗೊಳ್ಳುವರು. ಮನುಷ್ಯನು ಪಾಪವನ್ನಾಚರಿಸಿದರೂ ತಿಳಿಯದೆ ಆಚರಿಸುವನೇ ಹೊರತು ತಿಳಿದಮೇಲೆ ಎಂದೆಂದಿಗೂ ಆಚರಿಸಲಾರನು. ಇದು ಸತ್ಯನಿತ್ಯವಾದ ಅಮರವಾಣಿ. ಆದ್ದರಿಂದಲೇ ಜ್ಞಾನಿಗಳು ಪಾಪಿಗಳ ಬಗ್ಗೆ ಅನುಕಂಪೆಯನ್ನು ತೋರಿಸುವರು. ಅವರ ಬಗ್ಗೆ ಅಗ್ರಹಮಾಡುವವರು ಅವಿವೇಕಿಗಳೆನಿಸುವರು. ತಮ್ಮ ಸಚ್ಚಿದ್ರೂಪವನ್ನು ಯಾವಾಗಲೂ ನೆನೆಸಿಕೊಳ್ಳುವವರು ಎಂದಿಗೂ ಪಾಪಮೋಹಗಳಲ್ಲಿ ಸಿಲುಕಲಾರರು. ಒಮ್ಮೆ ಅವಿವೇಕದಿಂದ ಪಾಪಮೋಹಗಳಲ್ಲಿ ಸಿಲುಕಿದವರು ಮುಂದೆ ವಿವೇಕದಿಂದ ವರ್ತಿಸಿದರೆ ಪಾಪಮೋಹಗಳು ಪುಣ್ಯಪ್ರೇಮಗಳಾಗಿ ಪರಿಣಮಿಸುತ್ತವೆ. ಇದು ಪ್ರಪಂಚದಲ್ಲಿ ಸರ್ವರಿಗೂ ಅನುಭವಸಿದ್ಧವಾಗಿದೆ. ಆದ್ದರಿಂದ ಯಾರೊಬ್ಬರೂ ಹತಾಶರಾಗಬೇಕಾಗಿಲ್ಲ. ಇಚ್ಛಾಜ್ಞಾನಶಕ್ತಿಗಳ ವಿಕಾಸದಿಂದ ಎಲ್ಲರೂ ಶುದ್ಧರೂ ನಿರ್ಮಲರೂ ಆಗಲಿರುವರು. ಹಾಗೆಯೆ ಪ್ರತಿಯೊಬ್ಬ ಹೆಂಗಸೂ ಒಡವೆ

ವಸ್ತ್ರಗಳ ಮೂಲಕ ಹೊರಗಿನ ಒಯ್ಯಾರಕ್ಕೆ ಬಲಿಯಾಗದೆ ಆತ್ಮ ಮನಸ್ಸುಗಳನ್ನು ಇಚ್ಛಾಜ್ಞಾನಶಕ್ತಿಗಳಿಂದ ವಿಕಾಸಗೊಳಿಸಿ ಕೊಂಡರೆ ಇದೇ ಅವರಿಗೆ ಅಚ್ಚಳಿಯದ ಸೌಂದರ್ಯವೆನಿಸುತ್ತದೆ.

## ಕ್ರಿಯಾಶಕ್ತಿಯ ವಿಕಾಸ

ಹೀಗೆ ಇಚ್ಛಾಜ್ಞಾನಶಕ್ತಿಗಳನ್ನು ವಿಕಾಸಗೊಳಿಸಿಕೊಂಡ ಸ್ತ್ರೀಪುರುಷರು ತಮ್ಮ ಆನಂದಸ್ವರೂಪವನ್ನು ಯಾವತ್ತೂ ನೆನೆಸಿ ಕೊಳ್ಳುತ್ತಿದ್ದರೆ ಅವರ ತಮೋಗುಣವು ಆನಂದರೂಪವಾಗಿಯೇ ಪರಿಣಮಿಸಿ ಅವರಲ್ಲಿ ಕ್ರಿಯಾಶಕ್ತಿಯನ್ನು ಪ್ರಚೋದನಗೊಳಿಸು ತ್ತದೆ. ತಾನು ಆನಂದಸ್ವರೂಪನೆಂಬ ಅರಿವು ಯಾವನಿಗೆ ಜಾಗೃತ ವಾಗಿರುವುದೋ ಅವನಲ್ಲಿ ತಾಮಸಾಹಂಕಾರವು ನೆಲಸುವಂತೆಯೇ ಇಲ್ಲ. ಅವನು ಯಾವಾಗಲೂ ಕ್ರಿಯಾವಂತನಾಗಿ ಎಚ್ಚರಿಕೆ ಯಿಂದಲೇ ಬಾಳುವನು. ಸಂತೋಷವೇ ಸ್ತ್ರೀ ಪುರುಷರ ಸ್ವರೂಪ ವಾಗಿರುವಾಗ ಅವರಿಗೆ ತಮಸ್ಸಿನ ಮೋಹದೃಷ್ಟಿ ಹೇಗೆ ಅಂಟಿ ಕೊಂಡೀತು? ಸಂತೋಷಪ್ರಕೃತಿಯ ಜನರೆಲ್ಲರೂ ಯಾವತ್ತೂ ಕಾರ್ಯತತ್ಪರರಾಗಿಯೇ ಇರುವರು. ಕರ್ತವ್ಯನಿರ್ವಾಹವೇ ಅವರ ಜೀವನದ ಉಸಿರು. ಮುಂಜಾನಿಂದ ಸಂಜೆಯವರೆಗೂ ಅವರು ತಮ್ಮ ಕರ್ತವ್ಯಗಳನ್ನು ಈಶ್ವರನ ಸೇವೆಯೆಂದೇ ನಡೆಸುತ್ತಲಿರುವುದರಿಂದ ಅವರ ದೇಹ ಪಟುವೂ ಸುಂದರವೂ ಆಗುವುದು. ಅವರಿಗೆ ದುರ್ಮಾಗದಲ್ಲಿ ಪ್ರವರ್ತಿಸುವ ಬುದ್ಧಿಯೇ ಎಂದಿಗೂ ಹುಟ್ಟುವುದಿಲ್ಲ. ತಮ್ಮ ಸ್ವರೂಪವೇ ಪ್ರೇಮ, ಆನಂದ ಮತ್ತು ಸಂತೋಷವೆಂದು ತಿಳಿದು ಜೀವನದಲ್ಲಿ ಅದನ್ನು ಅಳ ವಡಿಸಿಕೊಂಡವರು ಪಾಪದಲ್ಲಿ ಹೇಗೆ ಪ್ರವರ್ತಿಸಿಯಾರು? ಅವರಿಗೆ ಕ್ರಿಯೆಯೇ ಜೀವನದಲ್ಲಿ ಸಾರವಾದ ವಸ್ತು. ಅದಾದರೂ

ಲೋಕಕಲ್ಯಾಣಕ್ಕಾಗಿ ಭಗವಂತನ ಆರಾಧನೆ ಎಂದೇ ನಡೆಯು ತ್ತದೆ. ಸ್ವಾರ್ಥತೆ, ವ್ಯಾಮೋಹಗಳ ಕಿಲುಬು ಇಚ್ಛಾಜ್ಞಾನಶಕ್ತಿ ಗಳ ವಿಕಾಸದಿಂದ ತೊಲಗಿರುವಾಗ ಕ್ರಿಯಾಶಕ್ತಿವಿಕಾಸವು ಮಾನವನ ಅಹಂಕಾರವನ್ನು ಹೇಗೆ ತೊಲಗಿಸದೆ ಬಿಟ್ಟೀತು? ಕ್ರಿಯಾವಂತನಿಗೆ ಅರಿಷ್ಟಾನಿಷ್ಟಗಳೆಲ್ಲವೂ ತೊಲಗಿ ಸಂಪತ್ಸೌ ಭಾಗ್ಯಗಳೆಲ್ಲವೂ ಕೈಸೇರುವುವು. ಆನಂದದ ಅನುಭವದಿಂದ ಮಾನವನು ಯಾವಾಗಲೂ ಪರಾರ್ಥವಾದ ಕ್ರಿಯೆಯಲ್ಲಿಯೇ ನಿರತನಾಗಿದ್ದು ಅಂತಹ ಅವಕಾಶವನ್ನೇ ಯಾವತ್ತೂ ಎದುರು ನೋಡುತ್ತಿರುವನು.

ಕ್ರಿಯಾಶಕ್ತಿಯ ವಿಕಾಸದಿಂದ ಶೋಭಿಸುವವನಿಗೆ ಸಂಸಾರ ಯಾತ್ರೆಯೂ ಭಗವದಾರಾಧನವೇ ಆಗುವುದು. ಅವನಿಗೆ ಮದುವೆ, ಸಂಸಾರ, ಭೋಗ, ವ್ಯವಹಾರ ಇವೆಲ್ಲವೂ ಭಗ ವಂತನು ಒಲಿದು ನೀಡಿದ ಪ್ರಸಾದವೆನಿಸುತ್ತವೆ. ಅವನಲ್ಲಿ ಅಹಂಕಾರದ ಸುಳಿವೇ ಇಲ್ಲದ್ದರಿಂದ ಅಹಂಭಾವದಲ್ಲಿ ನಿಂತು ಆವನು ಲೋಕದ ಹಿತವನ್ನು ಸಾಧಿಸುವನು. ಅಹಂಕಾರವು ಪ್ರವೃ ತಿಯ ಪ್ರಸಾದವೆನಿಸಿದರೆ ಅಹಂಭಾವವು ಆನಂದರೂಪನಾದ ಪರಮಾತ್ಮನ ಪ್ರಸಾದ. ಅಹಂಕಾರವು ಅನರ್ಥಕಾರಿಯಾದರೆ ಅಹಂಭಾವವು ಅರ್ಥಕ್ರಿಯಾಕಾರಿ ಅಂದರೆ ಅನಾಯಾಸವಾಗಿ ಸರ್ವಕಾರ್ಯಗಳನ್ನು ನಿರ್ವಹಿಸುವ ಕ್ರಿಯಾಶಕ್ತಿ ಎನಿಸುತ್ತದೆ. ಕ್ರಿಯಾಶಕ್ತಿ ಪರಮಾತ್ಮನ ಸ್ವಭಾವ. ಅವನು ಎಲ್ಲವನ್ನು ಹೊಂದಿದ್ದರೂ, ಅವನಿಗೆ ಯಾವ ಕೊರತೆಯೂ ಇಲ್ಲದಿದ್ದರೂ ಲೋಕದ ಜನರನ್ನು ಕಾರ್ಯೋನ್ಮುಖರನ್ನಾಗಿ ಮಾಡುವ ಸದ್ದು ದ್ದೇಶದಿಂದ ಅವನು ಯಾವಾಗಲೂ ಕಾರ್ಯತತ್ಪರನೇ ಆಗಿರು ವನು. ಅವನೇ ಜಗತ್ತಿಗೆ ಆದರ್ಶವಾದ ಕರ್ಮಯೋಗಿ ಎನಿಸಿರು

ವನು. "ವರ್ತ ಏವ ಚ ಕರ್ಮಣಿ" ಎಂದು ಅವನು ಹೇಳಿರುವ ಮಾತು ಸೋಮಾರಿಗಳನ್ನು ಚಾಟಿ ಏಟಿನಿಂದ ಹೊಡೆದು ಎಚ್ಚರಿಸುವಂತಿದೆ: ಅವನಲ್ಲಿ ಕ್ರಿಯಾಶಕ್ತಿಯು ಸಹಜವಾಗಿ ಇರುವುದರಿಂದಲೇ ಅವನು ತನ್ನ ಭಕ್ತರಿಗೆ ಅದೇ ಕ್ರಿಯಾಶಕ್ತಿಯನ್ನು ಪ್ರಸಾದರೂಪವಾಗಿ ಕರುಣಿಸುವನು. ಇದರಿಂದಲೇ ಮಾನವನು ದೇಹಶಕ್ತಿಸಂಪನ್ನನಾಗಿ ಲೋಕಕಲ್ಯಾಣವನ್ನು ಸಾಧಿಸಬಲ್ಲನು. ಒಬ್ಬನು ದುಃಖದಿಂದ ನರಳುತ್ತಿರುವಾಗ ಅದನ್ನು ನೋಡಿದವನು ಕ್ರಿಯಾಶಕ್ತಿವಿಕಾಸದಿಂದ ಕೂಡಿದ್ದರೆ ಅವನ ದುಃಖದ ಮೂಲವನ್ನು ವಿಚಾರಿಸಿ ಅದರ ಪರಿಹಾರಕ್ಕೆ ಸೂಕ್ತವಾದ ಕಾರ್ಯಕ್ರಮವನ್ನು ಕೈಗೊಳ್ಳುವನು. ಇದನ್ನೂ ಸಹ ಅವನು ಯಾವ ಫಲವನ್ನೂ ಬಯಸದೆ, ವೈಯಕ್ತಿಕದೃಷ್ಟಿಯನ್ನು ತೊರೆದು ಅವನೊಳಗಿರುವ ಪರಮಾತ್ಮನ ಪ್ರೀತ್ಯರ್ಥವಾಗಿ ತಾತ್ತ್ವಿಕ ದೃಷ್ಟಿಯಿಂದ ನಡೆಸುವನು. ಅವನು ಮಾಡಬೇಕಾಗಿಬಂದದ್ದೆಲ್ಲವನ್ನು ತನ್ನ ಕರ್ತವ್ಯವೆಂಬ ಶುದ್ಧಭಾವದಿಂದಲೇ ನಡೆಸುವನು. ಇದರಿಂದ ಅವನಿಗೆ ದುಃಖದೋಷಗಳೂ, ಪಾಪವಿಕಾರಗಳೂ ಅಂಟುವ ಸಂಭವವಿರುವುದಿಲ್ಲ. ಅವನು ಯಾರಿಂದಲೂ ಕೃತಜ್ಞತೆಯನ್ನು ಬಯಸದೆ ತನ್ನಲ್ಲಿಗೆ ಬಂದವರಿಗೆ ಸಂತೋಷಪಡಿಸುವುದೊಂದನ್ನೇ ನಿತ್ಯವೂ ಗಮನಿಸುತ್ತಿರುವನು. ಇದು ಕ್ರಿಯಾಶಕ್ತಿವಿಕಾಸದ ಅದ್ಭುತಮಹಿಮೆ. ಇದೆ ನಮ್ಮ ಯುವಯುವತಿಯರ ಆಜನ್ಮಸಿದ್ಧವಾದ ಹಕ್ಕು. ಇದನ್ನು ಅವರು ಪಡೆದು ಇದರಿಂದ ತಮ್ಮ ಶರೀರವನ್ನು ಅಲಂಕರಿಸಬೇಕು. ಇದೇ ನಿಜವಾದ ಶೃಂಗಾರ. ಇದಕ್ಕೇ ಪರಮೇಶ್ವರನು ಬೇಗನೆ ಪ್ರಸನ್ನನಾಗುವನು. ಸಾಧುವಾಗಲೀ ಪಾಪಿಯಾಗಲೀ ಮೆಚ್ಚುವ ಗುಣವೆಂದರೆ ಮಾನವನ ಕ್ರಿಯಾಶಕ್ತಿಯ ವಿಕಾಸವಲ್ಲದೆ ಬೇರೆಯಲ್ಲ.

ಎಲ್ಲರನ್ನೂ ಒಂದೇಬಗೆಯಲ್ಲಿ ಸಂತೈಸುವ ಪರವೈಶ್ವರ್ಯವೆಂದರೆ ಇದೇಯೆ. ಇದಕ್ಕೆ ಅನ್ಯ, ಪರಕೀಯ ಎಂಬ ಭೇದವಿಲ್ಲ. ಹೆಣ್ಣು ಗಂಡು, ಮುದುಕ, ಯುವಕ, ಪತಿವ್ರತೆ, ವಿಧವೆ ಎಂಬ ವ್ಯತ್ಯಾಸ ವಿಲ್ಲ. ಸರ್ವರನ್ನು ಒಂದೇವಿಧದಲ್ಲಿ ಸಮಾಧಾನಪಡಿಸಿ ಅಲಂಕರಿಸುವ ರತ್ನವೆಂದರೆ ಕ್ರಿಯಾಶಕ್ತಿವಿಕಾಸವೇ. ಇಂತಹ ರತ್ನವು ಎಲ್ಲರ ದೇಹವನ್ನೂ ಅಲಂಕರಿಸಿ ಒಳಗೂ ಹೊರಗೂ ಶುದ್ಧಿಯನ್ನುಂಟುಮಾಡಲಿ.

## ಉಪಸಂಹಾರ

ಮಾನವನಿಗೆ ಪರಿಪೂರ್ಣತೆ ಎಂಬುದು ಈ ಮೂರುಬಗೆಯ ಶಕ್ತಿವಿಕಾಸದಲ್ಲಿಯೇ ಅಡಗಿದೆ. ಇದೇ ಅವನಿಗೆ ನಿಜವಾದ ಸೌಂದರ್ಯ; ಸದಮಲಜ್ಞಾನಸಂಪತ್ತು; ಸಚ್ಚಿದಾನಂದರತ್ನ. ಇದನ್ನು ಪಡೆಯಲು ಮಾನವನು ತ್ಯಾಗಸೇವೆಗಳ ಆದರ್ಶವನ್ನು ಬಾಳಿನಲ್ಲಿ ಮನಗಾಣಬೇಕು. ಯಾವನು ಭೋಗದ ಕಿಲುಬಿಗೆ ಅಂಟಿಕೊಳ್ಳುವುದಿಲ್ಲವೋ, ತನ್ನ ಸುತ್ತಲೂ ಇರುವ ಜೀವರೆಲ್ಲರನ್ನೂ ಆತ್ಮೀಯರೆಂದು ಪ್ರೀತಿಸಿ ಅವರಿಗೆ ತನ್ನ ಕೈಲಾದಷ್ಟು ಸೇವೆಯನ್ನು ಸಂತೋಷದಿಂದ ಸಲ್ಲಿಸುವನೋ ಅವನೇ ಜೀವನದಲ್ಲಿ ಸರ್ವತೋಮುಖವಾದ ವಿಕಾಸವನ್ನು ಪಡೆಯಬಲ್ಲನು. ಇದುವೆ ಅವನು ಬಾಳಿನಲ್ಲಿ ಅವಶ್ಯವಾಗಿ ಪಡೆಯಬೇಕಾದ ಸೌಭಾಗ್ಯ. ಇದನ್ನು ಪಡೆದವನಿಗೆ ಮಾಯೆ ತನ್ನ ಆಕರ್ಷಣಗಳಿಂದ ಮೋಹಗೊಳಿಸಲಾರದು. ಇಂತಹವನಿಗೆ "ವಿಶ್ವಮಾಯಾ ನಿವೃತ್ತಿಃ" ಎಂಬ ಸತ್ಫಲವು ಲಭಿಸುವುದೆಂದು ಉಪನಿಷತ್ಕಾರರು ಪ್ರತಿಜ್ಞೆಮಾಡಿದ್ದಾರೆ. ಯಾವನು ತನ್ನ ಸಚ್ಚಿದಾನಂದಸ್ವರೂಪವನ್ನು ಅರಿತು ಇಚ್ಛಾಜ್ಞಾನಕ್ರಿಯಾಶಕ್ತಿಗಳ ವಿಕಾಸವನ್ನು

ಪಡೆಯುವನೋ ಅವನು ವಿಶ್ವದ ಆಗುಹೋಗುಗಳೆಲ್ಲವನ್ನೂ ಅರಿಯಬಲ್ಲನೆಂದು ಅದೇ ಉಪನಿಷತ್ಕಾರರು "ಏಕವಿಜ್ಞಾನೇನ ಸರ್ವವಿಜ್ಞಾನ" ಶ್ರುತಿಯಲ್ಲಿ ಜಗತ್ತಿಗೆ ಸಾರಿದ್ದಾರೆ. ಒಂದನ್ನು ತಿಳಿದರೆ ಎಲ್ಲವೂ ತಿಳಿಯುವುದೆಂಬುದೇ ಈ ಶ್ರುತಿಯ ಅರ್ಥ. ಸಚ್ಚಿದಾನಂದದ ವಿಜ್ಞಾನದಿಂದ ವಿಶ್ವವೆಲ್ಲದರ ಜ್ಞಾನವೂ ಆಗುವ ಪ್ರಯುಕ್ತ ಮಾನವರೆಲ್ಲರೂ ಈ ಮಹಾಕಾರ್ಯವನ್ನು ಶ್ರದ್ಧೆ ಯಿಂದ ನಡೆಸುವುದು ಅವಶ್ಯಕ. ದೇಹದಲ್ಲಿ ಬಲವಿರುವಾಗಲೇ ಅದನ್ನು ಪಳಗಿಸಿಕೊಳ್ಳುವುದು ವಿವೇಕಿಯ ಕರ್ತವ್ಯ. ದೇಹವು ಪಳಗಿದೊಡನೆ ಮನಸ್ಸು ಪಳಗುತ್ತದೆ. ಮನಸ್ಸು ಪಳಗಿದೊಡನೆ ಯಾವಾಗಲೂ ಅದರೊಡಗೂಡಿಯೇ ವ್ಯವಹರಿಸುತ್ತಿರುವ ಆತ್ಮವೂ ಪಳಗುತ್ತದೆ. ಇದುವೆ ತುಂಬುಜೀವನ. ಇಂತಹ ವಿಕಾಸವನ್ನು ಇಲ್ಲಿ ಬಾಳುವಾಗಲೇ ಸಾಧಿಸಿದವನೇ ಧನ್ಯನು. ಇದನ್ನು ಇಲ್ಲಿ ಪಡೆಯದೆ ಉದಾಸೀನಮಾಡಿದವನು ಮುಂದೆ ಎಲ್ಲಿಯೂ ಪಡೆಯಲಾರನು. ಇದನ್ನು ಇಂದ್ರಿಯಗಳ ಸಹಕಾರ ದಿಂದಲೇ ವಿವೇಕಿಯು ಸಾಧಿಸಬೇಕು.

ಇದರ ಸಾಧನೆಗೆ ಮಾನವನು ದೇಹದ ಯಾವ ಭಾಗವನ್ನೂ ತುಚ್ಛೀಕರಿಸಬೇಕಾಗಿಲ್ಲ; ಹಾಗೆಯೇ ಯಾವುದನ್ನು ಹೆಚ್ಚು ಪುರ ಸ್ಕರಿಸಲೂ ಬಾರದು. "ಅತಿ ಸರ್ವತ್ರ ವರ್ಜಯೇತ್" ಎಂಬುದೇ ಅವನ ಮೂಲಮಂತ್ರವಾಗಬೇಕು. ಹೀಗೆ ದೇಹ ಮನಸ್ಸು ಆತ್ಮ ಇವನ್ನು ಪಳಗಿಸಿಕೊಳ್ಳುವುದೇ ನಿಜಯೋಗ. ಇದರಿಂದಲೇ ಮಾನವನು ಎಲ್ಲಾಬಗೆಯ ಶಕ್ತಿ, ವರ್ಚಸ್ಸು, ಪ್ರಭಾವಗಳನ್ನು ಪಡೆದು ತೇಜಸ್ವಿಯೂ, ವೀರ್ಯವಂತನೂ ಆಗುವವನು; ಕಷ್ಟ ಕಾರ್ಪಣ್ಯಗಳ ಮಧ್ಯದಲ್ಲಿ ನಗುವಂತಹ ಸಂತೋಷಪ್ರಕೃತಿ ಯನ್ನು ಪಡೆಯುವ ಸೌಭಾಗ್ಯವೇ ಇದು. ಕ್ರೋಧಾವೇಶಗಳ

ಸನ್ನಿವೇಶದಲ್ಲಿ ಸಿಟ್ಟಿಗೇಳದೆ ಶಾಂತತೆಯಿಂದ ನಿಲ್ಲುವ ಎದೆಗಾರಿಕೆಯನ್ನು ದೊರಕಿಸುವ ಸುಯೋಗವೆಂದರೆ ಇದೇಯೆ. ಶತ್ರುಮಿತ್ರರನ್ನು ಸಮದೃಷ್ಟಿಯಿಂದ ಕಾಣುವ ಜ್ಞಾನಯೋಗವೇ ಇದು. ಸುಖದುಃಖಗಳನ್ನು ಸಂತೋಷದಿಂದ ಸ್ವಾಗತಿಸುವ ಕರ್ಮಯೋಗವೇ ಇದು. ಸ್ತುತಿನಿಂದೆಗಳನ್ನು ಸಮದೃಷ್ಟಿಯಿಂದ ಗೌರವಿಸುವ ಆತ್ಮವಿಶ್ವಾಸವೇ ಇದು. ಇಂತಹ ಸಂಪತ್ಸೌಭಾಗ್ಯ ಸಮೃದ್ಧಿಯನ್ನು ನಮ್ಮ ನಾಡಿನ ಯುವಯುವತಿಯರು ಸಾಧಿಸಲೆಂದು ಆಶಿಸಲಾಗಿದೆ.



# ಕೆಲವು ಸಾಹಿತ್ಯ ಕೃತಿಗಳು

## ಬೆಲೆ: ೨೫ ಪೈಸೆಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ಟಿ. ಎನ್. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ॥ ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ಟಿ. ಎಸ್. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣ
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ॥ ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣ
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ॥ ಹಿರಣ್ಮಯ

೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ॥ ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ॥ ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ—ಡಾ॥ ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ॥ ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ॥ ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ॥ ಹಿರಣ್ಮಯ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗ್ಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ॥ ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿ
೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ